# ಪ್ರಾಥಮಿಕ ಜ್ಞಾನ

## (ಹಿಂದೂ ಮತದಲ್ಲಿ ಆದಿಪತ್ಯ ಕ್ರಿಯೆ)

ಸ್ವರ ಇಂದೂ ಮತ
ವ್ಯಂಜನ ಹಿಂದೂ ಮತ

**ಒಂದೇ ಭಾಷೆ ಒಂದೇ ಪದ**
**ಎಲ್ಲಿದೆ ಬೇರೆ ಮತ**




ಗ್ರಂಥಕರ್ತ : ತ್ರಿಮತ ಐಕ್ಯೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (88) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು



www.thraithashakam.org





# ಪ್ರಾಥಮಿಕ ಜ್ಞಾನ


ಗ್ರಂಥಕರ್ತ : **ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (88) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 39 ಪ್ರಥಮ ಮುದ್ರಣ : ಏಪ್ರಿಲ್–2017

ಪ್ರತಿಗಳು : 1000 **ಬೆಲೆ. 65/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಿ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ-ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾ ಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವ ಗ್ರಂಥದಲ್ಲಿ ವಜ್ರವಾಕ್ಯಗಳು
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲು ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ
93. ಪ್ರಾಥಮಿಕ ಜ್ಞಾನ
94. ರಾಜಕೀಯ ರಾಜಕೀಯ
95. ಉಗ್ರವಾದ ಸತ್ಯಕ್ಕೋಸ್ಕರವೇ
96. ಒಬ್ಬ ವ್ಯಕ್ತಿಯಲ್ಲಿ ಎರಡು ಕೋನಗಳು
97. ಮಾನವತ್ವ
98. ದ್ಯಾನ – ಪ್ರಾರ್ಥನೆ – ನಮಾಜ್



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
 ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
 ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
 ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
 ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
 ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
 ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
 ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
ಮಹೇಂದ್ರಜಾಲ,
ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
(ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಗ್ರಾಹಿತ ಶಕ್ತಿ
121. ಭೌತಿಕಮು – ಅಭೌತಿಕಮು
122. ದೇವುನಿ ಆಜ್ಞ ಮರಣಂ
123. ಮತ ಸಾಮರಸ್ಯಂ
124. ಮೋಕ್ಷಮು – ಮೋಸಮು
125. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

---

**ಸೂಚನೆ** : ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635, 7619545963, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ), ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ, ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ), ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ, ರಾಯಚೂರು (ಜಿ) Cell :**9632418716**

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ (ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾನಗರ, ತೊಣಚಿಕೊಪ್ಪಲ್, ಮೈಸೂರ್
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮುಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಪ್ರಕಾಶ್ ರೆಡ್ಡಿ**
ಸೆಲ್:9845656774,9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ), ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಪ್ರಾಥಮಿಕ ಜ್ಞಾನ

ಮೊದಲನೆಯದನ್ನು "ಪ್ರಾಥಮಿಕ" ಎಂದು ಕರೆಯುತ್ತಾರೆ. ಮೊದಲು ಕಲಿಯಬೇಕಾದ ಜ್ಞಾನ ಪ್ರಾಥಮಿಕ ಜ್ಞಾನ. ಜ್ಞಾನಗಳು ಎರಡು ವಿಧಗಳು. ಒಂದು ಪ್ರಪಂಚ ಜ್ಞಾನ, ಎರಡನೆಯದು ಆತ್ಮಜ್ಞಾನ ಅಥವಾ ಪರಮಾತ್ಮ ಜ್ಞಾನ ಎಂದು ಕರೆಯುತ್ತೇವೆ. ಅರ್ಥವಾಗುವುದಕ್ಕೆ ಪರಮಾತ್ಮ ಜ್ಞಾನ ಎಂದು ಹೇಳಿದರೂ, ಶಾಸ್ತ್ರಬದ್ಧತೆ ಪ್ರಕಾರ ಆತ್ಮಜ್ಞಾನವೆಂದೇ ಹೇಳಬೇಕು. ಪ್ರಪಂಚ ಜ್ಞಾನದಲ್ಲಿ ಎರಡು ವಿಧಗಳಿವೆ. ಒಂದು ಅಕ್ಷರ ಜ್ಞಾನ, ಎರಡು ವ್ಯವಹಾರಿಕ ಜ್ಞಾನ. ವ್ಯವಹಾರಿಕ ಜ್ಞಾನಕ್ಕೆ ಮೊದಲನೆಯ ಗುರು ತಾಯಿ ಎಂದು ಹೇಳಬಹುದು. ವ್ಯವಹಾರಿಕ ಜ್ಞಾನ ಚಿಕ್ಕಂದಿನಲ್ಲಿ ಶಿಶುದಶೆಯಿಂದ ಪ್ರಾರಂಭವಾಗುತ್ತದೆ. ಅಕ್ಷರಜ್ಞಾನ ಪಾಠಶಾಲೆಗೆ ಹೋದಾಗ ಓದಿನಿಂದ ಪ್ರಾರಂಭವಾಗುತ್ತದೆ. ಅಕ್ಷರಜ್ಞಾನವನ್ನು ಮೊದಲು ತಿಳಿಸುವುದು ಪ್ರಾಥಮಿಕ ಪಾಠಶಾಲೆಯೆಂದು ಹೇಳಬಹುದು. ಪ್ರಾಥಮಿಕ ಪಾಠಶಾಲೆ ಜ್ಞಾನ ಬಾಲ್ಯದಶೆಯಿಂದ ಆರಂಭವಾಗುತ್ತದೆ. ಇನ್ನು ಆತ್ಮಜ್ಞಾನ ವಿಷಯಕ್ಕೆ ಬಂದರೇ ಕನಿಷ್ಟ 12 ವರ್ಷಗಳ ವಯಸ್ಸಿನಿಂದ ಪ್ರಾರಂಭವಾಗುವುದು. ಪೂರ್ವದಲ್ಲಿ 12 ವರ್ಷಗಳಿಂದ ಗುರುಕುಲ ಪಾಠಶಾಲೆಯಲ್ಲಿ ಗುರು ಬೋಧಿಸುವ ಜ್ಞಾನದ ಮುಖಾಂತರ ಆತ್ಮಜ್ಞಾನವನ್ನು ಕಲಿಯುತ್ತಿದ್ದರು. ಈ ವಿಧವಾಗಿ ಮನುಷ್ಯನಿಗೆ ಪ್ರಾಥಮಿಕ ಜ್ಞಾನ ಪ್ರಾರಂಭವಾಗಬೇಕಾಗಿದೆ.

ಶಿಶುದಶೆಯಲ್ಲಿ ತಾಯಿ ಹತ್ತಿರ ವ್ಯವಹಾರಿಕ ಜ್ಞಾನ ನಾವು ಹೇಳಿಕೊಂಡಂತೆ ಈ ದಿನ ಕೂಡಾ ಪ್ರಾರಂಭವಾಗುತ್ತಿದೆ. ಹಾಗೇ ಅಕ್ಷರ ಜ್ಞಾನ ಬಾಲ್ಯದಶೆಯಲ್ಲಿ ಪ್ರಾರಂಭವಾಗುತ್ತಿದೆ. ಆದರೆ ಒಂದು ಆತ್ಮಜ್ಞಾನ ವಿಷಯದಲ್ಲಿ ನಾವು ಹೇಳಿಕೊಂಡಂತೆ ನಡೆಯುತ್ತಿಲ್ಲ. ಯೌವನ ದಶೆಯಲ್ಲಿ ಆತ್ಮಜ್ಞಾನ ಪ್ರಾರಂಭ ಆಗದಿರುವುದರಿಂದ ಮನುಷ್ಯ ಆತ್ಮಜ್ಞಾನ (ದೈವಜ್ಞಾನ) ದಲ್ಲಿ ಪೂರ್ತಿ ಹಿಂದುಳಿದಿದ್ದಾನೆ. ಹಿಂದುಳಿದಿದ್ದಾನೆನ್ನುವುದಕ್ಕಿಂತ ಏನೂ ತಿಳಿಯದ ಸ್ಥಿತಿಯಲ್ಲಿದ್ದಾನೆಂದು ಹೇಳಬಹುದು. ಪೂರ್ವದಂತೆ ಆತ್ಮಜ್ಞಾನವನ್ನು ಬೋಧಿಸುವ ಗುರು ಕುಲ ಪಾಠಶಾಲೆಗಳು ಈ ದಿನ ಹುಡುಕಿದರೂ

ಕಾಣಿಸುವುದಿಲ್ಲ. ಅಲ್ಲಲ್ಲಿ ಗುರುಕುಲ ಪಾಠಶಾಲೆಗಳೆಂದು ಹೆಸರುವಾಸಿ ಯಾಗಿರುವವು ಇದ್ದರೂ ಅವು ಆತ್ಮಜ್ಞಾನವನ್ನು ಬೋಧಿಸುವವು ಅಲ್ಲದೇ ಪ್ರಪಂಚ ಜ್ಞಾನವನ್ನು, ಪ್ರಪಂಚ ಓದುಗಳನ್ನು ಬೋಧಿಸುವವಾಗಿವೆ. ಒಟ್ಟಿನಲ್ಲಿ ಆತ್ಮಜ್ಞಾನವನ್ನು ಬೋಧಸುವವರೇ ಇಲ್ಲದಂತೆ ಹೋಗಿದ್ದಾರೆ. ಕೆಲವರು ಗುರುಗಳೆಂದು ತಮ್ಮ ಪ್ರತಿಭೆಯನ್ನು ಹೇಳಿಕೊಳ್ಳುತ್ತಾ, ತಾವು ಪ್ರಜೆಗಳಿಗೆ ಆತ್ಮಜ್ಞಾನ ವನ್ನು ಬೋಧಿಸುತ್ತಿದ್ದೇವೆಂದು ಕೆಲವು ಆಶ್ರಮಗಳನ್ನು ಸ್ಥಾಪಿಸಿಕೊಂಡು ಆತ್ಮಜ್ಞಾನಕ್ಕೆ ತಮ್ಮ ಅಡ್ರಸ್ಸೇ ಸರಿಯಾದುದೆಂದು ಹೇಳುತ್ತಿರುವರು. ಅವರು ಬೋಧಿಸಿರುವುದಕ್ಕು ಆತ್ಮಜ್ಞಾನಕ್ಕು ಸ್ವಲ್ಪವೂ ಸಂಬಂಧ ಇರುವುದಿಲ್ಲ. ಭಕ್ತಿ ಭಾವವನ್ನು ಬೋಧಿಸುತ್ತಾ, ದೇವತಾ ಪೂಜೆಗಳನ್ನು ಅವರು ಮಾಡುತ್ತಾ ಇತರರೊಂದಿಗೆ ಕೂಡಾ ಮಾಡಿಸುತ್ತಿರುತ್ತಾರೆ. ಅವರ ಲೆಕ್ಕದಲ್ಲಿ ಅದೇ ನಿಜವಾದ ದೈವಜ್ಞಾನವಾಗಿ ಭಾವಿಸುತ್ತಿರುತ್ತಾರೆ. ವಾಸ್ತವವಾಗಿ ಅವರು ಆತ್ಮಜ್ಞಾನವನ್ನು ಹೇಳುವುದಿಲ್ಲ. 'ಆತ್ಮಜ್ಞಾನ' ಎಂದರೇ ಏನೋ ಕೂಡಾ ಅವರಿಗೆ ತಿಳಿದಿಲ್ಲ.

'ಆತ್ಮ', 'ಆತ್ಮಜ್ಞಾನ' ಎನ್ನುವ ಮಾತುಗಳನ್ನು ರೂಡಿ ಪದಗಳಾಗಿ, ಅಭ್ಯಾಸದ ಪದಗಳಾಗಿ ಬಳಸುತ್ತಿರುತ್ತಾರೆ. ಅಷ್ಟೇಹೊರತು ಆತ್ಮ ಎಂದರೆ ಏನೊ? ಅವರಿಗೆ ಸ್ವಲ್ಪವೂ ತಿಳಿದಿಲ್ಲ. ಈ ದಿನ ಚಿಕ್ಕ ಗುರುಗಳು, ದೊಡ್ಡ ಗುರುಗಳು ಎಷ್ಟೋಜನ ಎಷ್ಟೋ ಆಶ್ರಮಗಳನ್ನು ಸ್ಥಾಪಿಸಿ ಶಿಷ್ಯರನ್ನು ಸಂಪಾದಿಸಿಕೊಂಡು ಶಿಷ್ಯರಿಗೆ ಗುರು ಉಪದೇಶಗಳನ್ನು ಕೊಟ್ಟು, ಅವರಿಗೆ ಶಾಶ್ವತ ಗುರುಗಳಾಗಿ ಬದಲಾಗಿಹೋಗುತ್ತಿದ್ದಾರೆ. ಕೆಲವರು ತಮ್ಮ ಗುರೂಪದೇಶಗಳಿಗೆ ಯಾವುದೋ ಒಂದು ಹೊಸ ಹೆಸರಿಟ್ಟು ಎಲ್ಲರೂ ಅದಕ್ಕಾಗಿ ತಮ್ಮ ಹತ್ತಿರಕ್ಕೆ ಬರುವಂತೆ ಪ್ರಚಾರ ಮಾಡುತ್ತಿದ್ದಾರೆ. ಅದೇನೊ ಹೊಸ ಪದ್ಧತಿಯೆಂದು ತಿಳಿದ ವ್ಯಕ್ತಿಗಳು ತಾವು ಇದಕ್ಕುಮುನ್ನ ಇತರರ ಹತ್ತಿರ ಉಪದೇಶ ಹೊಂದಿದ್ದರೂ, ತಮಗೆ ಗುರು ಇದ್ದರೂ, ತಮ್ಮ ಗುರುವಿಗೆ ಸ್ವಲ್ಪವೂ ತಿಳಿಯದಂತೆ ಹೊಸ ಗುರು ಹತ್ತಿರಕ್ಕೆ ಹೋಗಿ ಹೊಸ ಉಪದೇಶ ಹೊಂದಿದವರು ಕೂಡಾ ಇದ್ದಾರೆ. ಗುರುಗಳು ಶಿಷ್ಯರ ಮೇಲೆ ಆಧಾರಪಟ್ಟು ಜೀವನ ಸಾಗಿಸುತ್ತಾ, ತಮ್ಮಿಂದಲೇ ತಮ್ಮ ಶಿಷ್ಯರು ಜೀವನ ಸಾಗಿಸುತ್ತಿದ್ದಾರೆಂದು ಹೇಳಿಕೊಳ್ಳುತ್ತಿದ್ದಾರೆ.

ಕೆಲವರು ಗುರುಗಳು ತಮ್ಮ ಉಪದೇಶವನ್ನು ಪಡೆಯಬೇಕೆಂದರೇ ಇಷ್ಟು ಮೊತ್ತದಲ್ಲಿ ಹಣ ಕೊಡಬೇಕೆಂದು ಹೇಳುತ್ತಿದ್ದಾರೆ. ಹಣ ಕೊಟ್ಟವರಿಗೆ ಮಾತ್ರ ಉಪದೇಶ ಕೊಡುತ್ತಿದ್ದಾರೆ. ಈ ವಿಧವಾಗಿ ಆತ್ಮಜ್ಞಾನ ವಿಷಯದಲ್ಲಿ ಅನೇಕರು ಅನೇಕ ವಿಧಗಳಾಗಿ ಪ್ರವರ್ತಿಸುತ್ತಿದ್ದಾರೆ. ಕೆಲವರು ಆಶ್ರಮಗಳು ಸ್ಥಾಪಿಸಿ ಮಾನವನ ಸೇವೆಯೇ ಮಾಧವನ ಸೇವೆ ಎನ್ನುತ್ತಾ ದೈವಜ್ಞಾನ ಸ್ವಲ್ಪವಾದರೂ ಇಲ್ಲದೇ ಮನುಷ್ಯರ ಸೇವೆಗೇ ಪರಿಮಿತಿಯಾಗಿದ್ದಾರೆ. ಕೆಲವರು ಆಶ್ರಮಗಳನ್ನು ತಯಾರುಮಾಡಿ 'ಯೋಗವಿದ್ಯೆ ಕಲಿಸಲಾಗುತ್ತದೆ' ಎಂದು ಬೋರ್ಡು ಇಟ್ಟು ವ್ಯಾಯಾಮಗಳು, ಆಸನಗಳು ಹಾಕುತ್ತಾ ಇದು ಇಂತಹ ಯೋಗಾಸನ, ಅದು ಮತ್ತೊಂದು ಯೋಗಾಸನ ಎಂದು ಹೇಳುತ್ತಿರುತ್ತಾರೆ. ಪಿರಿಮಿಡ್ ದ್ಯಾನ ಎಂದು ಕೆಲವರು, ದ್ಯಾನ ಮಾಡಿದರೆ ದೇವರು ತಿಳಿಯುತ್ತಾನೆಂದು, ದೇವರು ದ್ಯಾನ ಪ್ರಿಯನು, ದ್ಯಾನದ ಮೂಲಕವೇ ಮೋಕ್ಷವನ್ನು ಸಾಧಿಸಬಹುದೆಂದು ಕೆಲವರು ಹೇಳುತ್ತಿರುತ್ತಾರೆ. ಹೀಗೆ ಅನೇಕ ಜನರು ಅನೇಕವಾಗಿ 'ದೇವರ ಜ್ಞಾನ' ಎಂಬ ಹೆಸರಿನಲ್ಲಿ ಬೋಧನೆಗಳು ಹೇಳುತ್ತಾ, ಇದೇ ನಿಜವಾದ ಆಧ್ಯಾತ್ಮಿಕ ಎಂದು ಹೇಳುತ್ತಿದ್ದಾರೆ. ಆದರೆ ಅವರ ಆಧ್ಯಾತ್ಮಿಕದಲ್ಲಿ ಅತ್ಮ ಇರುವುದಿಲ್ಲ, ಆತ್ಮವನ್ನು ಅಧ್ಯಯನ ಮಾಡುವುದು ಇರುವುದಿಲ್ಲ.

ಆತ್ಮ ಎಂದರೇ ದೆವ್ವ ಅಲ್ಲವೇ! ಎನ್ನುವವರು ಕೂಡಾ ಆಧ್ಯಾತ್ಮಿಕ ಬೋಧನೆಗಳು ಹೇಳುತ್ತಿದ್ದೇವೆಂದು ಅನ್ನುತ್ತಿದ್ದಾರೆ. ಇಂತಹ ಸಮಯದಲ್ಲಿ ಅಸಲಾದ ಆತ್ಮಜ್ಞಾನ ಮರೆಯಲ್ಲಿ ಬಿದ್ದುಹೋಗಿ, ಗುರುಗಳು ಮತ್ತು ಬೋಧಕರು ನನಗೆ ತಿಳಿದಿರುವುದೇ ದೊಡ್ಡದೆಂದು ಕೆಲವರು, ಅಲ್ಲವೆಂದು ಕೆಲವರು ಚರ್ಚೆಗಳು ಸಮಾವೇಶಗಳು ಇಟ್ಟುಕೊಂಡು ಮಾತುಗಳಿಂದ ಹೊಡೆದಾಡುತ್ತಿದ್ದಾರೆ. ಇನ್ನು ವಿಧಗಳ ಜ್ಞಾನಮಾರ್ಗಗಳಿರುವಾಗ ಅದರಲ್ಲಿ ನಿಜವಾದ ಜ್ಞಾನ ಇಲ್ಲದಂತೆ ಹೋಗಿ, ಪ್ರಜೆಗಳು ಗುರುಗಳನ್ನು ಆಶ್ರಯಿಸಿ ಎಲ್ಲಿಯೂ ಏನೂ ತಿಳಿಯದೆ ನನ್ನ ಗತಿ ಏನೂ? ನಾನು ದೇವರನ್ನು ಹೇಗೆ ತಿಳಿಯಬೇಕು? ಎಂದು

ಬಾಧೆಪಡುತ್ತಿರುವ ಸಮಯದಲ್ಲಿ "ನಮ್ಮದೇ ನಿಜವಾದ ಜ್ಞಾನ, ನಮ್ಮ ಮತದೊಳಗೆ ಬಂದರೇ ನಿಮಗೆ ಪಾಪ ಕ್ಷಮಾಪಣೆ ಇದೆ, ಹಾಗೆ ನಿಮ್ಮ ಮತದಲ್ಲಿ ಇಲ್ಲ" ಎಂದು ಕ್ರೈಸ್ಥರು ತಮ್ಮ ಮತವ್ಯಾಪ್ತಿಗಾಗಿ ಪ್ರಚಾರ ಮಾಡುತ್ತಿರುವಾಗ ದೈವಜ್ಞಾನದ ಮೇಲೆ ಆಸಕ್ತಿ ಇರುವ ಹಿಂದೂಗಳು ಹಿಂದೂ ಮತವನ್ನು ಬಿಟ್ಟು ಕ್ರೈಸ್ಥವ ಮತದೊಳಗೆ ಸೇರಿಹೋಗುವುದಕ್ಕೆ ಪ್ರಾರಂಭಿಸಿದ್ದಾರೆ. ಹಿಂದೂಮತದಲ್ಲಿನ ಚಿಕ್ಕ ಕುಲದವರೆಲ್ಲರೂ ದೊಡ್ಡ ಕುಲದವರ ದೃಷ್ಠಿ ಕುಲವಿವಕ್ಷದಿಂದ ಹೆಚ್ಚಿನ ಭಾಗ ಚಿಕ್ಕ ಕುಲಸ್ಥರು ಕ್ರೈಸ್ಥವ ಮತದಲ್ಲಿ ಸೇರಿಹೋಗುವುದು ನಡೆದಿದೆ. ಶೇ. ಹತ್ತರಷ್ಟು ದೊಡ್ಡ ಕುಲಸ್ಥರ ವಿವಕ್ಷೆಗೆ ಹಿಂದೂಮತಕ್ಕೆ ಸಂಖ್ಯೆಯಲ್ಲಿ ಹಿಡಿದುಕೊಳ್ಳಲು ಬಲವಾದ ಕೊಂಬೆಗಳಿರುವಂತೆ ಚಿಕ್ಕ ಕುಲಗಳಲ್ಲಿ ಸುಮಾರು ತೊಂಭತ್ತ (90) ರಷ್ಟು ಮತವನ್ನು ಮಾರ್ಪಡಿಸಿಕೊಂಡು ಇತರೆ ಮತಗಳಲ್ಲಿ ಸೇರಿಹೋಗಿದ್ದಾರೆ. ಈ ವಿಧವಾಗಿ ಹಿಂದೂಮತದಲ್ಲಿನ ಸಂಖ್ಯೆ ಬಹಳಮಟ್ಟಿಗೆ ಕಡಿಮೆಯಾಗಿದೆ. ಕುಲವಿವಕ್ಷದಿಂದ ಹಿಂದೂಮತವನ್ನು ಬಿಟ್ಟು ಕ್ರೈಸ್ಥವ ಮತದೊಳಗೆ ಹೋಗಿದ್ದೇವೆಂದು ಬಹಳಜನ ಪ್ರತ್ಯಕ್ಷವಾಗಿ ಹೇಳುತ್ತಿದ್ದಾರೆ.

ದೊಡ್ಡಕುಲಸ್ಥರು ತಮ್ಮಮೇಲೆ ಬಿದ್ದಿರುವ ಅಪವಾದವನ್ನು ಬಚ್ಚಿಡುವುದಕ್ಕೆ ಹಿಂದೂಮತದಲ್ಲಿನವರು ಕ್ರೈಸ್ತವ ಮತದೊಳಗೆ ತಮ್ಮಿಂದಲೇ ಹೋಗಿದ್ದಾರೆನ್ನುವ ವಿಷಯವನ್ನು ಯಾರೂ ಅಂದುಕೊಳ್ಳದೆ ದಾರಿ ಮರಳಿಸುವುದಕ್ಕೆ ಹಿಂದೂ ಮತರಕ್ಷಣ ಸಂಸ್ಥೆಗಳನ್ನು ಏರ್ಪಾಟು ಮಾಡಿದ್ದಾರೆ. ಹಾಗೆ ತಯಾರಾಗಿರುವವೇ ಈದಿನ ಹಿಂದೂಮತದಲ್ಲಿ ಕಾಣಿಸುತ್ತಿರುವ ನಾಲ್ಕು ಅಥವಾ ಐದು ವಿಧಗಳ ಹಿಂದೂಮತ ರಕ್ಷಣೆ ಸಂಸ್ಥೆಗಳು. ಅವು ದೊಡ್ಡಕುಲಸ್ಥರು ನಾಯಕರಾಗಿದ್ದು ತಯಾರು ಮಾಡಿರುವವೇ. ಅಂತಹ ಸಂಸ್ಥೆಗಳನ್ನು ಕುರಿತು ಚೆನ್ನಾಗಿ ಪ್ರಚಾರ ಮಾಡಿ, ಉಳಿದ ಕುಲಸ್ಥರನ್ನು ಅದರಲ್ಲಿ ಸದಸ್ಯರನ್ನಾಗಿ ನೇಮಿಸಿ, ಇತರೆ ಮತಸ್ಥರು ತಮ್ಮ ಮತವನ್ನು ಪ್ರಚಾರ ಮಾಡಿ ಹಿಂದೂಗಳನ್ನು ಅವರ ಮತದೊಳಗೆ ಸೇರಿಸಿಕೊಳ್ಳುತ್ತಿದ್ದಾರೆಂದು ಬೋಧಿಸಿ, ತಮಗೆ ಸರಿಹೋಗದವರನ್ನು ಇತರೆ ಮತಸ್ಥರನ್ನಾಗಿ ತೋರಿಸಿ, ತಮ್ಮ ಸದಸ್ಯರಿಂದ ಅವರ ಮೇಲೆ ದಾಳಿ

ಮಾಡಿಸುತ್ತಿದ್ದಾರೆ. ಅವರು ನೇರವಾಗಿ ಕ್ರೈಸ್ಥವ ಪ್ರಚಾರಕರ ಮೇಲೆ ದಾಳಿ ಮಾಡುತ್ತಿಲ್ಲ. ತಮ್ಮನ್ನು ಸಮರ್ಥಿಸದವರ ಮೇಲೆ, ತಮ್ಮನ್ನು ತಪ್ಪು ಎಣಿಸುವವರ ಮೇಲೆ, ಅವರು ಹಿಂದೂಗಳಾದರೂ ಅವರನ್ನು ಪರಮತಸ್ಥರನ್ನಾಗಿ ಇಲ್ಲವೇ ಪರಮತವನ್ನು ಪ್ರಚಾರ ಮಾಡುತ್ತಿದ್ದಾರೆಂದು ಆರೋಪಣೆಗಳನ್ನು ತೋರಿಸುತ್ತಾ ಹಿಂದೂಗಳಿಂದಲೇ ಹಿಂದೂಗಳ ಮೇಲೆ ದಾಳಿ ಮಾಡಿಸುತ್ತಿದ್ದಾರೆ. ಸತ್ಯವನ್ನು ವಕ್ರೀಕರಿಸದೆ ನೇರವಾಗಿ ಹೇಳುವ ನಮ್ಮ ಮೇಲೆ ಹಿಂದೂ ರಕ್ಷಣದವರು ಅಂತಹ ದಾಳಿಗಳನ್ನೇ ಮಾಡಿಸಿದ್ದಾರೆ. ಹಿಂದೂಮತದಲ್ಲಿ ಉಳಿದ ಕುಲದವರೆಲ್ಲರೂ ತಮ್ಮ ನಾಯಕರು ಹೇಳುವ ಮಾತುಗಳನ್ನು ಕೇಳುತ್ತಿದ್ದಾರೆ ಹೊರತು, ನಾಯಕರು ತಮ್ಮೊಂದಿಗೆ ತಪ್ಪು ಕೆಲಸಗಳನ್ನು ಮಾಡಿಸುತ್ತಿದ್ದಾರೆಂದು ಅಂದುಕೊಳ್ಳುತ್ತಿಲ್ಲ. ಹೀಗೆ ಈ ದಿನ ಹಿಂದೂಮತವನ್ನು ರಕ್ಷಿಸುತ್ತಿದ್ದೇವೆಂದು ಹೇಳುವವರು ಹಿಂದೂಮತವನ್ನು ಕ್ಷೀಣಿಸುವಂತೆ ಮಾಡುತ್ತಿದ್ದಾರೆ. ಹಿಂದೂ ರಕ್ಷಕರೆಂದು ಮೇಲ್ನೋಟಕ್ಕೆ ಹೇಳುತ್ತಾ, ಒಳಗೆ ಅವರಿಗೆ ಸರಿಹೋಗದವರ ಎಲ್ಲರ ಮೇಲೆ ತಮ್ಮ ಮನುಷ್ಯರಿಂದ ದಾಳಿ ಮಾಡಿಸುವುದು ಅಭ್ಯಾಸವಾಗಿ ಹೋಗಿದೆ. ಇಂತಹ ಕೆಲಸಗಳಿಂದ ಕಾಲ ಕಳೆದಂತೆಲ್ಲ ಹಿಂದೂಮತವು ಕ್ಷೀಣಿಸಿಹೋಗುತ್ತಿದೆ. ಒಂದು ಸಮಯದಲ್ಲಿ ಹಿಂದೂಮತ ಸಂಸ್ಥೆಯವರು ಹಿಂದೂಗಳಾದ ನಮ್ಮ ಮೇಲೆಯೇ ದಾಳಿಗಳು ಮಾಡುವುದರಿಂದ ಇಂತಹ ಮತದಲ್ಲಿ ಇರಬಾರದು ಕ್ರೈಸ್ಥರಾಗಿಯೋ, ಮುಸ್ಲಿಮರಾಗಿಯೋ ಮಾರ್ಪಡಬೇಕೆನ್ನುವ ಆಲೋಚನೆ ನಮಗೂ ಬಂದಿದೆ. ನಾವು ಎಷ್ಟೋಜನ ಹಿಂದೂಗಳಿಗೆ ಜ್ಞಾನದಲ್ಲಿ ಮಾರ್ಗದರ್ಶಕರಾಗಿದ್ದು, ಈಗ ಯಾರೋ ಏನೊ ಮಾಡಿದ್ದಾರೆಂದು ಮತ ಬದಲಾಯಿಸುವುದು ಒಳ್ಳೆಯದಲ್ಲವೆಂದು ಹಿಂದೂಗಳಾಗಿಯೇ ನಿಂತುಹೋಗಿದ್ದೇವೆ.

ಈ ವಿಧವಾಗಿ ಹಿಂದೂಮತದಲ್ಲಿನ ದೊಡ್ಡ ಕುಲಸ್ಥರಿಂದ, ಅವರ ದೊಡ್ಡಸ್ತಿಕೆಯಿಂದ ಬಹಳಜನ ಹಿಂದೂಮತವನ್ನು ಬಿಟ್ಟು ಇತರೆ ಮತಸ್ಥರಾಗಿ ಬದಲಾಗಿಹೋಗಿದ್ದಾರೆ. ಆದರೂ ಹಿಂದೂಮತದಲ್ಲಿನವರು, ಅಂದರೇ

ಮತರಕ್ಷಣಾ ಮುಸುಗಿನಲ್ಲಿದ್ದು ಮತಕ್ಕೆ ಕೆಡಕು ಮಾಡುವವರು, ಹಿಂದೂಮತ ಕ್ಷೀಣತೆಗೆ ನಾವೇ ಕಾರಣವೆಂದು ಅಂದುಕೊಳ್ಳುತ್ತಿಲ್ಲ. ಹಿಂದೂಮತದಲ್ಲಿ ಅಧಿಪತ್ಯವನ್ನು ಕೋರಿ ಅದಕ್ಕೆ ತಿಳುವಳಿಕೆಯಿಂದ ಮತರಕ್ಷಣಾ ಸಂಸ್ಥೆಗಳನ್ನು ಸ್ಥಾಪಿಸಿ ಅದರಲ್ಲಿ ತಮ್ಮ ಮಾತನ್ನು ಕೇಳುವವರಿಂದ ತಮ್ಮ ಅಧಿಕಾರವನ್ನು ಚಲಾಯಿಸುತ್ತಲೇ ಇದ್ದಾರೆ. ಇಂತಹವರಿಗೆ ಹಿಂದೂ ಧರ್ಮಗಳ್ಯಾವುವೊ ಸ್ವಲ್ಪವೂ ತಿಳಿದಿಲ್ಲ. ಆದರೂ ನಾವೇ ನಿಜವಾದ ಹಿಂದೂಗಳು ಎನ್ನುವಂತೆ, ಹಿಂದೂಮತದಲ್ಲಿ ನಾವೇ ಮುಖ್ಯವಾದವರು ಎನ್ನುವಂತೆ ಕೆಲವರು ಸೇರಿ ಒಂದು ಸಂಘವನ್ನು, ಮತ್ತೇ ಕೆಲವರು ಸೇರಿ ಮತ್ತೊಂದು ಸಂಘವನ್ನು ತಯಾರುಮಾಡಿ, ಅವುಗಳಿಗೆ ಬೇರೆಬೇರೆ ಹೆಸರುಗಳು ತಗಲಿಸಿ ಅವೆಲ್ಲವೂ ಹಿಂದೂಮತವನ್ನು ರಕ್ಷಿಸುವುದಕ್ಕೆ ಕೆಲಸ ಮಾಡುತ್ತಿವೆಯೆಂದು ಹೇಳುತ್ತಿದ್ದಾರೆ. ಆದರೂ ಪ್ರತಿ ದಿನ ಹಿಂದೂಗಳು ಕ್ರೈಸ್ಥರಾಗಿ ಬದಲಾಗುತ್ತಲೇ ಇದ್ದಾರೆ. ಹಾಗೆ ಬದಲಾಗುವಾಗ ಇಷ್ಟು ಮತರಕ್ಷಣೆ ಸಂಸ್ಥೆಗಳಿದ್ದು ಏನು ಪ್ರಯೋಜನೆ? ಮತವನ್ನು ರಕ್ಷಿಸುವವರಿಗೆ ಮತಧರ್ಮಗಳು ತಿಳಿದಿಲ್ಲವೆಂದರೇ ಅವರ ಕೆಲಸ ಹೇಗಿರುತ್ತದೋ ನೋಡಿರಿ.

ಹಿಂದೂಮತದಲ್ಲಿ ಮತರಕ್ಷಣಾ ಸಂಸ್ಥೆಯಲ್ಲಿರುವವರಿಗೆ ಯಾವುದು ಹಿಂದೂಗಳಲ್ಲಿನ ಪ್ರಾಥಮಿಕ ಜ್ಞಾನ ತಿಳಿದಿಲ್ಲ. ಪ್ರಾಥಮಿಕ ಜ್ಞಾನವಾಗಲಿ, ಹಿಂದೂ ಧರ್ಮಗಳಾಗಲಿ ತಿಳಿಯದವರು ಮತರಕ್ಷಕರಾಗಿರುವುದು ಆಶ್ಚರ್ಯ. ಮತಧರ್ಮಗಳಾಗಲಿ ಮತಗ್ರಂಥವಾಗಿ ಹೆಸರುವಾಸಿಯಾದ ಗ್ರಂಥವಾಗಲಿ ತಿಳಿಯದವರು ಮತವನ್ನು ರಕ್ಷಿಸುತ್ತೇವೆ ಎನ್ನುವುದು ಆಯುಧಗಳ ಹೆಸರುಗಳು ಕೂಡಾ ತಿಳಿಯದವನು ನಾನು ಸೇನಾಧಿಪತಿ ಎನ್ನುವಂತಿದೆ. ಸೇನಾಧಿಪತಿ ಆಗುವವನು ಆಯುಧಗಳ ಹೆಸರುಗಳು ತಿಳಿದಿರಬೇಕು, ಆಯುಧಗಳು ಬಳಸುವ ವಿಧಾನ ತಿಳಿದಿರಬೇಕು. ನಂತರ ಯುದ್ಧ ನೈಪುಣ್ಯತೆಯ ಪಾಠವನ್ನು ಕಲಿತವ ನಾಗಿರಬೇಕು. ಅದು ಏನೂ ಇಲ್ಲದವನು ಹೇಗೆ ಸೇನಾಧಿಪತಿ ಆಗಲಾರನೋ, ಹಾಗೆ ಹಿಂದೂಮತದಲ್ಲಿ ಪ್ರಾಥಮಿಕ ಜ್ಞಾನ ತಿಳಿಯದವನು, ಹಿಂದೂಧರ್ಮಗಳು

ತಿಳಿಯದವನು, ಹಿಂದೂಗಳ ದೈವಗ್ರಂಥವನ್ನು ತಿಳಿಯದವನು ಹಿಂದೂಮತ ರಕ್ಷಕನು ಆಗಲಾರನು. ಆದರೂ ತಮ್ಮ ಲೋಪಗಳನ್ನು ಮುಚ್ಚಿಡುವುದಕ್ಕೆ, ತಮ್ಮ ಮೇಲೆ ಯಾರಿಗೂ ಅನುಮಾನ ಬಾರದಂತೆ ಇರುವುದಕ್ಕೆ ಕೆಲವರು ಹಿಂದೂರಕ್ಷಣಾ ಸಂಘದಲ್ಲಿರುವವರು ಪರಮತಗಳನ್ನು ವಿಮರ್ಶಿಸುವ ಕರಪತ್ರಗಳನ್ನು ಚಿಕ್ಕ ಪ್ಯಾಕೆಟ್ ಪುಸ್ತಕಗಳನ್ನು ತಯಾರಿಸಿ ಪ್ರಜೆಗಳಿಗೆ ಹಂಚುವುದು ನೋಡಿದರೆ ಅವರ ಘನತೆಯನ್ನು ಕಾಪಾಡಿಕೊಳ್ಳುವುದಕ್ಕೆ ಹೊರತು ಹಿಂದೂ ಮತವನ್ನು ಕಾಪಾಡುವುದಕ್ಕೆ ಅಲ್ಲವೆಂದು ತಿಳಿಯುತ್ತಿದೆ. ಅವರು ಪ್ರಚರಿಸಿದ ಮಾತುಗಳಲ್ಲಿ ಅವರ ಸಾಮರ್ಥ್ಯವೇನೊ ತಿಳಿದುಹೋಗುತ್ತಿದೆ. ವೇಮನಯೋಗಿ ಪದ್ಯವನ್ನು ಮೂರು ಪಂಕ್ತಿಗಳು ಹೇಳಿ ನಾಲ್ಕನೆ ಪಂಕ್ತಿಯಲ್ಲಿ 'ಕೇಳಯ್ಯ ವೇಮ' ಅನ್ನದಂತೆ, 'ಗದರಾ ಸುಮತಿ' ಎಂದು ಸುಮತಿ ಶಕತದಲ್ಲಿನ ಪದ್ಯವು ಮುಕ್ತಾಯವನ್ನು ಹೇಳಿದಂತೆ ಅವರ ಬರಹವಿದೆ. ಅವರ ಬರಹವನ್ನನುಸರಿಸಿ ಅವರಲ್ಲಿರುವ ಹಿಂದೂತ್ವವೇನೊ ತಿಳಿದುಹೋಗುತ್ತಿದೆ. ಅಂತಹ ಬರಹವನ್ನು ಒಂದನ್ನು ತೆಗೆದು ಇಲ್ಲಿ ಪ್ರಸ್ಥಾಪಿಸುತ್ತಿದ್ದೇವೆ.

ಎಷ್ಟೋ ಜನ ನಮ್ಮನ್ನು ಪರಮತ ಪ್ರಚಾರಕರೆಂದು ಹೇಳಿದ್ದಾರೆ. ಹಿಂದೂಗಳ ಮುಸುಗಿನಲ್ಲಿ ಇತರೆ ಮತವನ್ನು ಪ್ರಚಾರ ಮಾಡುವ ಪರಮತಸ್ಥರೆಂದು ಕೆಲವರೂ, ಹಿಂದೂಗಳಲ್ಲಿಯೇ ಇವರದ್ದು ಪ್ರತ್ಯೇಕ ಗುಂಪು, ಇವರನ್ನು ಹಿಂದೂಗಳಾಗಿ ಒಪ್ಪಿಕೊಳ್ಳಬಾರದೆಂದು ಕೆಲವರೂ ಅಂದಿದ್ದಾರೆ. ಅಷ್ಟೇ ಅಲ್ಲದೆ ತಮ್ಮ ಕೈಕೆಳಗಿರುವ ಉಳಿದ ಕುಲಸ್ಥರಿಂದ ನಮ್ಮ ಮೇಲೆ ವಾದನೆಗು ಕೂಡಾ ಕಳಿಸಿದ್ದಾರೆ. ಅವರು ಮಾತ್ರ ಎಲ್ಲಿಯೂ ಹೊರಗೆ ಬರುವುದಿಲ್ಲ. ಇದೆಲ್ಲವೂ ಹಿಂದೂ ಮತದಲ್ಲಿ ತಮ್ಮ ಅದಿಪತ್ಯವನ್ನು ನಿಲ್ಲಿಸಿಕೊಳ್ಳುವುದಕ್ಕೆ ಕೆಲವರು ದೊಡ್ಡ ಕುಲಸ್ಥರ ಕೆಲಸವೆಂದು ನನಗೆ ಅರ್ಥವಾಗಿದೆ. ನಾನು ದೊಡ್ಡ ಕುಲಸ್ಥನು ಅಲ್ಲವಲ್ಲ! ನಾನು ಚೌದರಿ ಕುಲದಲ್ಲಿ ಹುಟ್ಟಿದವನಾಗಿರುವುದರಿಂದ ಇತರರು ಯಾರೂ ಬೋಧಕರಾಗಿ, ಗುರುಗಳಾಗಿ ಇರಬಾರದೆನ್ನುವ ಅವರ ಉದ್ದೇಶಕ್ಕೆ ನಾವು ಅಡ್ಡವಾಗಿ ಕಾಣಿಸಿರಬಹುದು. ಇದಕ್ಕುಮುನ್ನ ಸುಮಾರು

ಎರಡುಸಾವಿರ ವರ್ಷಗಳಿಂದ ಹಿಂದೂಮತದಲ್ಲಿ ಸಿದ್ದಾಂತಕರ್ತರು ಬಂದಿದ್ದಾರೆ. ಮೊದಲು ಬಂದವರು ಆದಿಶಂಕರಾಚಾರ್ಯರವರು, ಅದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡಿದ್ದಾನೆ. ಎರಡನೆ ಸಲ ಬಂದವರು ವಿಶಿಷ್ಟಾದ್ವೈತ ಸಿದ್ಧಾಂತಕರ್ತ. ಆತನ ಹೆಸರು ರಾಮಾನುಜಾಚಾರ್ಯರವರು. ಮೊದಲು ಬಂದ ಆದಿಶಂಕರ ಚಾರ್ಯನು ಬ್ರಾಹ್ಮಣನಾಗಿದ್ದು, ಆತನು ಕೇರಳದಿಂದ ಬಂದವನು. ಎರಡನೆಸಲ ಬಂದಿರುವ ರಾಮಾನುಜಾಚಾರ್ಯರವರು ತಮಿಳುನಾಡಿನಿಂದ ಬಂದವನು ಕೂಡಾ ಬ್ರಾಹ್ಮಣನೇ. ಅದ್ವೈತಕ್ಕು, ವಿಶಿಷ್ಟಾದ್ವೈತಕ್ಕು ವೈರತ್ವ ದೀರ್ಘಕಾಲವಾಗಿ ಸಾಗಿದೆ. ಮೂರನೆಯವರಾಗಿ ಮಧ್ವಾಚಾರ್ಯರವರು ಬಂದಿದ್ದಾರೆ. ಆತನು ದ್ವೈತ ಸಿದ್ಧಾಂತವನ್ನು ಪ್ರಕಟಿಸಿದ್ದಾನೆ. ಆತನು ಕರ್ನಾಟಕದಿಂದ ಬಂದಿರುವ ಬ್ರಾಹ್ಮಣನು. ಈ ವಿಧವಾಗಿ ಮೂವರು ಸಿದ್ಧಾಂತಕರ್ತರು ಒಂದೇಕುಲಕ್ಕೆ ಸೇರಿದವರು. ಆದ್ದರಿಂದ ಬ್ರಾಹ್ಮಣ ಕುಲದವರೆಲ್ಲರೂ ಅವರನ್ನು ದೊಡ್ಡದಾಗಿ ಹೇಳಿಕೊಳ್ಳುತ್ತಿರುತ್ತಾರೆ. ಅದ್ವೈತವೆಂದರೇ ಎರಡು ಅಲ್ಲದಿರುವುದು ಒಂದೆಂದು ಅರ್ಥ. ದ್ವೈತ ಸಿದ್ಧಾಂತವೆಂದರೇ ಎರಡಾಗಿರುವುದು. ಈಗ ಕಳೆದ 38 ವರ್ಷಗಳಿಂದ ನಾವು **ತ್ರೈತ ಸಿದ್ಧಾಂತವನ್ನು** ಪ್ರಕಟಿಸಿದ್ದೇವೆ. ನಾನು ಆಂಧ್ರದಿಂದ ಬಂದವನು, ಕುಲ ಕಮ್ಮ ಕುಲ (ಚೌದರಿ). ಕುಲದ ಹತ್ತಿರವೇ ನಾನು ಕೆಲವರಿಗೆ ವಿರುದ್ಧವಾಗಿ ಕಾಣಿಸುತ್ತಿದ್ದೇನೆ. ಆದ್ದರಿಂದ ಅವರು ನನ್ನನ್ನು ಕುರಿತು ದುಷ್ಪ್ರಚಾರ ಮಾಡುತ್ತಿದ್ದಾರೆ. ಹಿಂದೂಮತ ಕುಲವಿವಕ್ಷದಿಂದಲೇ ಚೇತರಿಸಿಕೊಳ್ಳದಷ್ಟು ಕ್ಷೀಣಿಸಿಹೋಗಿದೆ. ಈಗ ಹಿಂದೂಗಳಾದ ನಮ್ಮನ್ನು ಹಿಂದೂಗಳಲ್ಲವೆಂದು ಪಕ್ಕಕ್ಕೆ ತಳ್ಳಿದರೆ ಸಿದ್ಧಾಂತಕರ್ತರು ಕೊನೆಗೆ ಹಿಂದೂಗಳಾಗಿ ಉಳಿಯುವುದು ಒಂದು ಕುಲದವರೆ ಇರುತ್ತಾರೆ. ಈಗಾಗಲೇ ನಮ್ಮ ಸಿದ್ಧಾಂತದಲ್ಲಿನ ಸತ್ಯವನ್ನು ನೋಡಿ ಎಷ್ಟೋಜನ ಹಿಂದೂಗಳು ನಮ್ಮ ಹತ್ತಿರಕ್ಕೆ ಬಂದು ಜ್ಞಾನವನ್ನು ತಿಳಿದು ಸಂತೋಷಪಡುತ್ತಿದ್ದಾರೆ. ಒಂದು ಹಿಂದೂಗಳೇ ಅಲ್ಲದೆ ಉಳಿದ ಮತದವರು ಕೂಡಾ ತ್ರೈತ ಸಿದ್ಧಾಂತದಲ್ಲಿನ ಜ್ಞಾನವನ್ನು ತಿಳಿದುಕೊಳ್ಳುತ್ತಿದ್ದಾರೆ. ತ್ರೈತ ಸಿದ್ಧಾಂತ ವೇಗವಾಗಿ ಮುಂದಕ್ಕೆ ಹೋಗುತ್ತಿದೆ. ತ್ರೈತ ಸಿದ್ಧಾಂತವನ್ನು ಕುರಿತು ಬರೆದ ಗ್ರಂಥಗಳಲ್ಲಿ ಭೂತಗಳ ಶಕ್ತಿ, ಗ್ರಹಗಳ ಶಕ್ತಿ ಇರುವುದರಿಂದ

ಆ ಗ್ರಂಥಗಳು ಮನುಷ್ಯನ ಶರೀರಕ್ಕೆ ಅಂಟಿಕೊಂಡು ಕಿತ್ತರು ಬಿಡದಂತೆ ಹಿಡಿದುಕೊಂಡು, ಮನುಷ್ಯನಲ್ಲಿನ ಕರ್ಮವನ್ನು ಸುಟ್ಟುಹಾಕುತ್ತಿವೆ. ಪ್ರತ್ಯಕ್ಷವಾಗಿ ಬಾಧೆಗಳನ್ನು ನಿರ್ಮೂಲಿಸುತ್ತಿವೆ. ಇದೆಲ್ಲವೂ ತಿಳಿದರೂ, ಕೆಲವರು ಸಂತೋಷ ಪಡುವುದಕ್ಕೆ ಬದಲು ಅಸೂಯೆಪಟ್ಟು ಕೆಟ್ಟದಾಗಿ ಪ್ರಚಾರ ಮಾಡುತ್ತಾ, ಅವರಿಗೆ ಕೈಲಾಗಿದ್ದು ಇತರರನ್ನು ಸುಲಭವಾಗಿ ನಂಬಿಸುವುದಾದ ಮತ ಪ್ರಚಾರವನ್ನು ತಪ್ಪಾಗಿ ಹೇಳುವುದು ಮಾಡುತ್ತಿದ್ದಾರೆ. ಪರಮತವನ್ನು ಪ್ರಚಾರ ಮಾಡುತ್ತಿದ್ದೇವೆಂದು ಹೇಳುತ್ತಿದ್ದಾರೆ. ಮೊದಲಿಗೆ ನಾವು ಹಿಂದೂಗಳೇ ಅಲ್ಲವೆಂದು ಹೇಳುತ್ತಿದ್ದಾರೆ.

ಹಿಂದೂಮತ ರಕ್ಷಕರೆಂದು ಹೆಸರಿಟ್ಟುಕೊಂಡವರು ನಮ್ಮನ್ನು ಹಿಂದೂಗಳು ಅಲ್ಲವೆಂದರೇ ಕೆಲವು ಲಕ್ಷಗಳ ಜನರನ್ನು ಹಿಂದೂಗಳು ಅಲ್ಲವೆನ್ನುವಂತೆ ಆಗುತ್ತಿದೆ. ಒಬ್ಬ ಹಿಂದೂವು ಕ್ರೈಸ್ಥನಾಗಿ ಬದಲಾದರೆ ಹಿಂದೂಮತ ಕ್ಷೀಣಿಸಿಹೋಗುತ್ತಿದೆ. ಹಿಂದೂಮತವನ್ನು ರಕ್ಷಿಸಬೇಕೆಂದು ಸಂಘಗಳನ್ನು ಸ್ಥಾಪಿಸಿಕೊಂಡವರೇ ನಮ್ಮನ್ನು ಹಿಂದೂಗಳಲ್ಲ ಎಂದರೇ ಕೆಲವು ಸಾವಿರಾರೂ, ಸುಮಾರು ಲಕ್ಷಗಳ ಮಂದಿಯನ್ನು ಹಿಂದೂಗಳಿಂದ ಬೇರ್ಪಡಿಸಿ ಬೇರೆಮತಸ್ಥರೆಂದು ಹೇಳಿದರೆ ಹಿಂದೂ ರಕ್ಷಕರು, ಹಿಂದೂಮತವನ್ನು ರಕ್ಷಿಸಿ ದಂತೆನಾ ಇಲ್ಲವೇ ಕ್ಷೀಣಿಸಿ ಹೋಗಲು ಮಾಡಿದಂತೆನಾ ನೀವೆ ನೋಡಿರಿ. ಇದೆಲ್ಲವೂ ನಾವು ಕಮ್ಮ(ಚೌದರಿ) ಕುಲದಲ್ಲಿ ಹುಟ್ಟಿರುವುದರಿಂದ ಹಾಗೆ ಮಾಡುತ್ತಿದ್ದಾರೆಂದು ಅರ್ಥವಾಗುತ್ತಿದೆ. ಹಿಂದೂಮತ ಕ್ಷೀಣಿಸಿಹೋಗುತ್ತಿದೆ. ನಾವು ಅದನ್ನು ರಕ್ಷಿಸುತ್ತೇವೆಯೆಂದು ಹೇಳುವವರೇ ನಮ್ಮನ್ನು ಸ್ವತಃವಾಗಿ ಅವರು ಹಿಂದೂಗಳು ಅಲ್ಲವೆನ್ನುತ್ತಿದ್ದಾರೆಂದರೇ ಅವರು ನಿಜವಾಗಲೂ ಹಿಂದೂಮತವನ್ನು ನಾಶಮಾಡುತ್ತಿದ್ದಾರೆ ಹೊರತು, ಅದನ್ನು ಕಾಪಾಡುತ್ತಿಲ್ಲವೆಂದು ತಿಳಿಯುತ್ತಿದೆ. ಹಿಂದೂಮತದಲ್ಲಿ ಒಬ್ಬ ಸಿದ್ಧಾಂತಕರ್ತನಾಗಿರುವ ನಮ್ಮನ್ನು ಹಿಂದೂವೇ ಅಲ್ಲವೆನ್ನುವುದರಲ್ಲಿ ಕುಲವಿವಕ್ಷ, ಅಸೂಯೆ ಹೊರತು ಬೇರೆ

ಏನು ಕಾಣಿಸಲಿಲ್ಲ. ಹೀಗೆ ಮಾತನಾಡುವುದರಿಂದ ಹಿಂದೂಮತ ಕ್ಷೀಣಿಸುವುದು ಹೊರತು ಬೇರೆ ಗತ್ಯಂತರವೇ ಇಲ್ಲ.

ಹಾಗೆ ಅವರು ಮಾತನಾಡುವುದಕ್ಕೆ ಕಾರಣ ಹಿಂದೂಮತದಲ್ಲಿನ ಪ್ರಾಥಮಿಕ ಜ್ಞಾನ ಅವರಿಗೆ ತಿಳಿಯದಿರುವುದು ಒಂದು ಕಾರಣವೆಂದು ಕೂಡಾ ಹೇಳಬಹುದು. ಕುಲವಿವಕ್ಷ ಶೇ.60 ರಷ್ಟು ಇರುವಾಗ, ಪ್ರಾಥಮಿಕ ಜ್ಞಾನ ಇಲ್ಲದಿರುವುದು ಶೇ.40 ರಷ್ಟು ಇರುವುದರಿಂದ ಹಿಂದೂ ಧರ್ಮ ರಕ್ಷಕರು ಕೂಡಾ ಹಿಂದೂ ಧರ್ಮ ಭಕ್ಷಕರಾಗಿ ಬದಲಾಗಿಹೋಗಿದ್ದಾರೆ. ಕುಲವಿವಕ್ಷ ಶೇ. 60 ರಷ್ಟು ಇದೆ. ಅದನ್ನು ನಾವು ಏನು ಮಾಡಲಾರೆವು. ಪ್ರಾಥಮಿಕ ಜ್ಞಾನ ವಿಷಯದಲ್ಲಾದರೇ ಸ್ವಲ್ಪಮಟ್ಟಿಗೆ ಅವರಿಗೆ ತಿಳಿದಿರುವುದು ಅಜ್ಞಾನವೆಂದು, ತಿಳಿಯದ ಪ್ರಾಥಮಿಕ ಜ್ಞಾನವನ್ನು ಹೇಳಬಹುದು. ಪ್ರಾಥಮಿಕ ಜ್ಞಾನವನ್ನು ತಿಳಿಸುವುದರಿಂದ ಸ್ವಲ್ಪಮಟ್ಟಿಗೆ ಅವರಲ್ಲಿ ಬದಲಾವಣೆಬಂದು, ಸ್ವಲ್ಪ ಜ್ಞಾನಿಗಳಾಗಿ ಬದಲಾಗುವುದಕ್ಕೆ ಅವಕಾಶವಿದೆ. ಹಿಂದೂ ಧರ್ಮಗಳು ತಿಳಿದು ಜ್ಞಾನಿಗಳಾಗಿ ಬದಲಾಗುವುದರಿಂದ ಆಗ ಕುಲವಿವಕ್ಷ ಇಲ್ಲದಂತೆ ಹೋಗಬಹುದು. ಆದ್ದರಿಂದ ನಮಗೆ ವಿರುದ್ಧವಾಗಿ ಮಾತನಾಡುವವರಿಗೆ, ಅವರಿಗೆ ತಿಳಿದಿರುವುದು ಜ್ಞಾನ ಅಲ್ಲವೆಂದು, ವಾಸ್ತವಕ್ಕೆ ಅವರಿಗೆ ಪ್ರಾಥಮಿಕ ಜ್ಞಾನ ಕೂಡಾ ತಿಳಿಯದೆಂದು ಅದನ್ನು ಅವರಿಗೆ ಹೇಳುವುದಕ್ಕೆ ಪ್ರಯತ್ನಿಸುತ್ತಿದ್ದೇವೆ. ನಾವು ಹೇಳುವ ಜ್ಞಾನ ಒಂದುಮತಕ್ಕೆ ಮಾತ್ರವೇ ಅನ್ವಯಿಸುವುದಲ್ಲದೇ, ಭಗವದ್ಗೀತೆಯಲ್ಲಿನ ಜ್ಞಾನ ಉಳಿದ ಎರಡು ಮತದವರಿಗೆ ಅನ್ವಯಿಸುತ್ತದೆಂದು ಹೇಳುತ್ತಿದ್ದೇವೆ.

ಹಿಂದೂಮತದಲ್ಲಿನ ಹಿಂದೂ ಮತ ರಕ್ಷಕರಾದವರು ಇತರೆ ಮತಗಳನ್ನು ವಿಮರ್ಶಿಸಿ ಬರೆದ ಮಾತುಗಳನ್ನು ತೆಗೆದುಕೊಂಡು ಅವುಗಳಿಗೆ ಸಕ್ರಮವಾದ ಮಾರ್ಗದಲ್ಲಿ ಸಮಾಧಾನ ಹೇಳುತ್ತೇವೆ. ಅದರಿಂದ ಹಿಂದೂಮತ ಕ್ಷೀಣಿಸದಂತೆ ಅಭಿವೃದ್ಧಿಯಾಗುತ್ತದೆಂದು ನಂಬುತ್ತಿದ್ದೇವೆ. ಪೂರ್ವದಂತೆ ಮೂರು ವಿಧಗಳ ಪ್ರಾಥಮಿಕ ಜ್ಞಾನಗಳಲ್ಲಿ ಮೂರನೆಯದಾದ ಜ್ಞಾನವನ್ನು ತಿಳಿಸುವ ಗುರು ಇಲ್ಲದಿರುವುದರಿಂದ ಹಿಂದೂಗಳಿಗೆ ಪ್ರಾಥಮಿಕ ಜ್ಞಾನವೇ ತಿಳಿಯದೆ ಹೋಗಿದೆ.

ಅದನ್ನು ಈಗ ತಿಳಿಯುವುದಕ್ಕೆ ಸಜ್ಜಾಗೋಣ. ಇದರಿಂದ ಇತರೆ ಮತಗಳ ಮೇಲೆ ಕೂಡಾ ವಿಶ್ವಾಸ ಹೆಚ್ಚಾಗುತ್ತದೆ. ನಾನು ಮೂರು ಮತಗಳಿಗು ಗುರುವು. ನನಗೆ ಭಗವದ್ಗೀತೆ ಹೇಗೆ ಅರ್ಥವಾಗಿದೆಯೋ ಹಾಗೆ ಉಳಿದ ಎರಡು ದೈವ ಗ್ರಂಥಗಳು ಅರ್ಥವಾಗಿವೆ. ಹಿಂದೂಮತದಲ್ಲಿ ಎಲ್ಲಿಯಾದರೂ ಜ್ಞಾನ ವಿಷಯದಲ್ಲಿ ತಪ್ಪು ಭಾವನೆಗಳಿದ್ದರೆ ಅದನ್ನು ತೋರಿಸಿ, ಆ ತಪ್ಪನ್ನು ಸರಿಮಾಡಿ ನಿಜವಾದ ಜ್ಞಾನವನ್ನು ತಿಳಿಸುವುದು ನಮ್ಮ ಜವಾಬ್ಧಾರಿ. ಹಾಗೆಯೇ ಕ್ರೈಸ್ಥವರಲ್ಲಿಯೂ, ಮುಸ್ಲಿಮರಲ್ಲಿಯೂ ಅವರ ಗ್ರಂಥಗಳಿಂದ ತಪ್ಪಾಗಿ ಅರ್ಥಮಾಡಿಕೊಂಡಿದ್ದರೆ ಅದನ್ನು ಕೂಡಾ ಸರಿಮಾಡಿ ಹೇಳುತ್ತಿರುತ್ತೇವೆ. ದೇವರ ವಿಷಯದಲ್ಲಿ ಯಾವ ಮತದವರು ಪೊರಪಾಟಾದರೂ ಆ ಪೊರಪಾಟನ್ನು ಸರಿತಿದ್ದಿ ನಿಜಭಾವವನ್ನು ತಿಳಿಸುತ್ತಿರುತ್ತೇವೆ. ನಮ್ಮ ದೃಷ್ಠಿಯಲ್ಲಿ ಎಲ್ಲಾ ಮತಗಳಿಗು ದೇವರೊಬ್ಬನೆ, ಜ್ಞಾನ ಒಂದೇ. ಮತವನ್ನು ದೇವರು ಇಡಲಿಲ್ಲ. ಮನುಷ್ಯನು ಕಲ್ಪಿಸಿಕೊಂಡಿರುವುದೇ ಮತ.

ನನ್ನ ದೃಷ್ಠಿಯಲ್ಲಿ ಮತಭಾವನೆಗಳು ಎಲ್ಲಿಯೂ ಇರುವುದಿಲ್ಲ. ದೇವರು ಎಲ್ಲರಿಗೂ ಒಂದೇ ಜ್ಞಾನವನ್ನು ಹೇಳಿದ್ದಾನೆ. ಆದ್ದರಿಂದ ಮೂರು ದೈವಗ್ರಂಥಗಳಲ್ಲಿ ಒಂದೇ ಜ್ಞಾನ ಕಾಣಿಸುತ್ತಿದೆ. ನಾನೂ ಹಿಂದೂಗಳಲ್ಲಿ ಉತ್ತಮವಾದ ಜ್ಞಾನವಂತನು. ಹಾಗೇ ಉಳಿದ ಎರಡು ಮತಗಳ ಜ್ಞಾನದಲ್ಲಿಯೂ ಉತ್ತಮವಾದ ಜ್ಞಾನ ತಿಳಿದಿದೆ. ಆದ್ದರಿಂದ ಹಿಂದೂ ಮತದಲ್ಲಿ ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿದ್ದೇವೆ. ತ್ರೈತ ಸಿದ್ಧಾಂತ ಅರ್ಥವಾದರೆ ಅವನು ಯಾರಾದರೂ ಸಂಪೂರ್ಣ ಜ್ಞಾನಿ ಆಗಬಲ್ಲನು. ನಾನು ಜ್ಞಾನದಿಂದ ಯಾವ ಮತದವರೊಂದಿಗಾದರೂ ಮತನಾಡಬಲ್ಲನು. ನಾನು ಹೇಳುವ ಜ್ಞಾನವೇ ಮೂರು ದೈವಗ್ರಂಥಗಳಲ್ಲಿ ಒಂದಾಗಿಯೇ ಇದೆ. ಭಗವದ್ಗೀತೆಯಲ್ಲಿನ ವಾಕ್ಯವು ಬೈಬಲ್, ಖುರಾನ್ ಗ್ರಂಥಗಳಲ್ಲಿ ಕೂಡಾ ಇದೆ.

ಹಿಂದೂಗಳು ಈದಿನ ನಮ್ಮ ಮತವನ್ನು ನಾವು ರಕ್ಷಿಸಿಕೊಳ್ಳುತ್ತೇವೆ ಎನ್ನುತ್ತಿದ್ದಾರೆ. ವಾಸ್ತವವಾಗಿ ಅವರಿಗೆ ಪ್ರಾಥಮಿಕ ಜ್ಞಾನ ತಿಳಿಯದಿರುವುದರಿಂದ

ಮತ ಎನ್ನುವ ಹೆಸರನ್ನಿಟ್ಟು ಹಿಂದೂಮತ ಎನ್ನುತ್ತಿದ್ದಾರೆ. ಪ್ರಾಥಮಿಕ ಜ್ಞಾನ ತಿಳಿಯುವುದರಿಂದ ಹಿಂದೂಮತ ಮತ ಅಲ್ಲವೆಂದು ಪಥವೆಂದು ತಿಳಿಯಬಲ್ಲದು. ಸೃಷ್ಠಿ ಆದಿಯಿಂದ ಹಿಂದೂ ಸಮಾಜವಿದೆ. ಇದು ಮತವಲ್ಲ ಇದಕ್ಕೆ ಪ್ರವಕ್ತ ಯಾರೂ ಇಲ್ಲ. ಎರಡು ಸಾವಿರ ವರ್ಷಗಳ ಕೆಳಗಿನವರೆಗು ಹಿಂದೂ ಸಮಾಜಕ್ಕೆ ಮತವೆನ್ನುವ ಹೆಸರು ಇಲ್ಲ. ಯಾವಾಗಾದರೆ ಕ್ರೈಸ್ಥವವು ಮತವಾಗಿ ಹೇಳಲ್ಪಟ್ಟಿದೆಯೋ ಆಗ ಹಿಂದೂಗಳು ಕೂಡಾ ನಮ್ಮದು ಹಿಂದೂಮತವೆಂದು ಹೇಳಿಕೊಂಡಿದ್ದಾರೆ. ಇದನ್ನು ಅನುಸರಿಸಿ ನೋಡಿದರೆ, ಎರಡು ಸಾವಿರ ವರ್ಷಗಳಿಗಿಂತ ಹಿಂದಿನ ಪ್ರಪಂಚದಲ್ಲಿ ಮತವೆನ್ನುವ ಹೆಸರೇ ಇಲ್ಲ. ಹಿಂದೂ ಸಮಾಜ ಕೆಲವು ಲಕ್ಷಗಳ ವರ್ಷಗಳಿಂದ ಇದ್ದರೂ ಎರಡು ಸಾವಿರ ವರ್ಷಗಳ ವರೆಗು ಮತವೆನ್ನುವ ಹೆಸರು ಇಲ್ಲ. ಜ್ಞಾನಮಾರ್ಗದಲ್ಲಿ (ಪಥದಲ್ಲಿ) ಮುಂದಕ್ಕೆ ಹೋಗುತ್ತಿದ್ದರು. ಈಗಿನ ಕಾಲದಲ್ಲಿ ಹಿಂದೂಗಳು, ಹಿಂದೂಮತ ರಕ್ಷಕರೆಂದು ಹೇಳಿಕೊಳ್ಳುವವರಿಗೆ ತಿಳಿಯದ ಸತ್ಯವೊಂದು ಇದೆ. ಅದು ಏನೆಂದರೇ! ಹಿಂದೂ ಎನ್ನುವ ಹೆಸರು 150 ವರ್ಷಗಳವರೆಗು ಇಲ್ಲ. 150 ವರ್ಷಗಳ ಪೂರ್ವದಲ್ಲಿ 'ಇಂದೂ' ಎನ್ನುವ ಹೆಸರು ಇತ್ತು. ಸ್ವರ "ಇ" ನಿಂದ ಹೇಳಲ್ಪಡುವುದು ಈ ದಿನ ವ್ಯಂಜನ "ಹಿ" ಆಗಿ ಬದಲಾಗಿಹೋಗಿದೆ. ಅದು ಈ ಮಧ್ಯ ಕೇವಲ 150 ವರ್ಷಗಳ ಕೆಳಗೆ ಬದಲಾಗಿದೆಯೆಂದು ಇಂದಿನ ಹಿಂದೂಗಳಿಗೆ ತಿಳಿದಿಲ್ಲ. 2000 ವರ್ಷಗಳ ಕೆಳಗೆ ಇಂದೂಮತವೆನ್ನುವ ಹೆಸರಿನಿಂದ ಹೇಳಲ್ಪಡುತ್ತಿತ್ತು. ಅದಕ್ಕಿಂತ ಮೊದಲು ಇಂದೂಗಳು ಎಂದು ಮಾತ್ರ ಹೇಳಿಕೊಳ್ಳುತ್ತಿದ್ದರು. ಇಂದೂಗಳು ಎಂದರೇ ಜ್ಞಾನಿಗಳೆಂದು ಅರ್ಥ. ಪೂರ್ವದಲ್ಲಿ ಕೃತಯುಗದಲ್ಲಿಯೇ ಇತರೆ ದೇಶದವರು ಬಂದು ಇಲ್ಲಿ ದೈವಜ್ಞಾನಿಗಳು ಹೆಚ್ಚಾಗಿದ್ದಾರೆಂದು ಅವರನ್ನು ಇಂದೂಗಳು ಎನ್ನುವುದು ನಡೆದಿದೆ. ಇಂದೂ ಎಂದರೇ ಜ್ಞಾನಿಯೆಂದು ಅರ್ಥ. ಇಂದೂಗಳು (ಜ್ಞಾನಿಗಳು) ನಿವಾಸಿಸುವ ದೇಶವನ್ನು ಇತರೆ ದೇಶಸ್ಥರು ಇಂದೂದೇಶವೆಂದು ಹೇಳಿದ್ದಾರೆ. ಹಾಗೆ ಇಂದೂ ದೇಶವಾಗಿ ಹೇಳಲ್ಪಟ್ಟ ಹೆಸರು 150 ವರ್ಷಗಳ ಕೆಳಗೆ ಇಂದೂ ಹೋಗಿ ಹಿಂದೂವಾಗಿ ಬದಲಾಗಿದೆ. ವಾಸ್ತವವಾಗಿ ಹಿಂದೂ ಎನ್ನುವ ಪದಕ್ಕೆ ಅರ್ಥವಿಲ್ಲ. ಇಂದೂ ಎನ್ನುವ ಪದಕ್ಕೆ

'ಜ್ಞಾನಿ' ಎಂದು ಅರ್ಥವಿದೆ. ನಾವು ಹೇಳುವ ಮಾತಿಗೆ ಆಧಾರವಾಗಿ ಎರಡು ನ್ಯೂಸ್ ಪೇಪರ್‌ಗಳನ್ನು ನೋಡಬಹುದು.

Sakshi News pepar, 12-10-2015

## 'ಹಿಂದೂ ಪದಕ್ಕೆ ನಿರ್ವಚನ ತಿಳಿದಿಲ್ಲ'

ಇಂಡೋರ್ : ರಾಜ್ಯಾಂಗ, ನ್ಯಾಯಪರವಾಗಿ ಹಿಂದೂ ಪದಕ್ಕೆ ನಿರ್ವಚನ ತಿಳಿಯದೆಂದು ಕೇಂದ್ರ ಹೋಂಶಾಖೆ ತಿಳಿಸಿದೆ. ಹಿಂದೂ ಪದದ ನಿರ್ವಚನ ಹೇಳಬೇಕೆಂದು ಮಧ್ಯಪ್ರದೇಶ್‌ಗೆ ಸೇರಿದ ಚಂದ್ರಶೇಖರ್ ಗೌರ್ ಎಂಬ ವ್ಯಕ್ತಿ ಸಮಾಚಾರ ಹಕ್ಕು ಕಾನೂನಿಗೆ ಮಾಡಿಕೊಂಡ ದರಕಾಸ್ತಿಗೆ (ಪಿಟಿಷನ್) ಉತ್ತರಕೊಡುತ್ತಾ ಹೋಂಶಾಖೆ ಮೇಲಿನ ರೀತಿಯಲ್ಲಿ ಸ್ಪಂದಿಸಿದೆ. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರ ಇಲ್ಲವೆಂದು ಕೇಂದ್ರ ಪೌರ ಸಂಬಂಧಗಳ ಶಾಖಾಧಿಕಾರಿ ಗುರುತಿಸಿದಂತೆ ಕೇಂದ್ರ ತಿಳಿಸಿದೆ. ಎಂತಹ ನಿರ್ವಚನ ಇಲ್ಲದಿರುವಾಗ ಇಂತಹ ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿಸುತ್ತಿದ್ದೀರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟೀಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದೀರೆಂದು ಗೌರ್ ಪ್ರಶ್ನಿಸಿದ್ದಾರೆ.

ಪ್ರಮುಖರ ಲೇಖ

Sakshi News pepar, 21-01-2014



# ಇಂದೂ ದೇಶವೇ ಇಂಡಿಯಾ!

ಹಿಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಅಂದಿನ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೆ ಹಿಂದೂ ದೇಶವಾಗಿ ಬದಲಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತ ಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು, ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನದಿಂದ

ಈ ವಿಧವಾಗಿ ಅರ್ಥವಿಲ್ಲದ ಹಿಂದೂಗಳಾಗಿ ನಾವು ಕರೆಯಲ್ಪಡುತ್ತಿದ್ದೇವೆ. ಇದೆಲ್ಲಾ ಮತಕ್ಕೆ ಸಂಬಂಧಿಸಿದ ಪ್ರಾಥಮಿಕ ಜ್ಞಾನ. ಮೊದಲು ಅದು ತಿಳಿಯದಿರುವುದರಿಂದ ಮತ ವಿಷಯದಲ್ಲಿ ಅಜ್ಞಾನ ಸೇರಿದೆ. ಉಳಿದ ಯಾವ ವಿಷಯದಲ್ಲಿ ಕೂಡಾ ಕನಿಷ್ಟ ಪ್ರಾಥಮಿಕ ಜ್ಞಾನ ಇಲ್ಲದಿರುವುದರಿಂದ ಎಲ್ಲಾ ವಿಷಯಗಳಲ್ಲಿ ಅಜ್ಞಾನವೇ ಇದೆ. ಆದರೇ ನಾವು ಜ್ಞಾನದಲ್ಲಿಯೇ ಇದ್ದೇವೆಂದು ಎಲ್ಲರೂ ಅಂದುಕೊಳ್ಳುತ್ತಿದ್ದಾರೆ. ನೀವು ಜ್ಞಾನದಲ್ಲಿ ಇಲ್ಲ ಅಜ್ಞಾನದಲ್ಲಿದ್ದು ಹಿಂದೂಮತವನ್ನು ನಾಶ ಮಾಡುತ್ತಿದ್ದೀರೆಂದು, ಹಿಂದೂ ಮತವನ್ನು ಉದ್ಧರಿಸುವುದು ನೀವು ಅಲ್ಲ ನಾವು ಎಂದು ತಿಳಿಸುವುದಕ್ಕಾಗಿ, ಹಿಂದೂಗಳಲ್ಲಿದ್ದು ನಾವು ಜ್ಞಾನಿಗಳು ಎಂದುಕೊಳ್ಳುವವರ ವಿಷಯವನ್ನೇ ಹೆಚ್ಚಾಗಿ ಬರೆಯಬೇಕೆಂದುಕೊಂಡಿದ್ದೇವೆ. ಇಂದಿನ ಹಿಂದೂಗಳು ಇತರೆ ಮತಗಳನ್ನು ವಿಮರ್ಶಿಸುತ್ತಾ ನಮ್ಮಲ್ಲಿನ ಅಜ್ಞಾನವನ್ನು ಹೊರಗೆ ಇಟ್ಟುಕೊಂಡಿದ್ದಾರೆ. ಅದರಿಂದ ಇತರೆ ಮತದವರು ಅಜ್ಞಾನಿಗಳೆಂದು ತಿಳಿಯಲಿಲ್ಲ ಆದರೇ, ಅವರನ್ನು ವಿಮರ್ಶಿಸುವ ಇವರೇ ಅಜ್ಞಾನಿಗಳಾಗಿ ಹೊರಬಿದ್ದಿದ್ದಾರೆಂದು ಹೇಳುತ್ತಿದ್ದೇವೆ. ಇತರರನ್ನು ವಿಮರ್ಶಿಸುವ ಶಕ್ತಿ ಇದೆಯಾ ಇಲ್ಲವಾ! ಎಂದು ಆಲೋಚಿಸಿ ವಿಮರ್ಶೆಗೆ ಇಳಿದಿದ್ದರೇ ಚೆನ್ನಾಗಿರುತ್ತಿತ್ತು. ಯಾವ ವಿಷಯದಲ್ಲಿ ಕೂಡಾ ಪ್ರಾಥಮಿಕ ಜ್ಞಾನ ಇಲ್ಲದವರು ಇತರರನ್ನು ವಿಮರ್ಶಿಸುವುದು ಏತಕ್ಕೆ? ತಮ್ಮಲ್ಲಿನ ಅಜ್ಞಾನವನ್ನು ಹೊರಗಿಟ್ಟುಕೊಳ್ಳುವುದು ಏತಕ್ಕೆ?

'ಬೈಯ್ಯುವ ಬಾಯಿ, ತಿರುಗುವ ಕಾಲುಗಳು ಸುಮ್ಮನಿರುವುದಿಲ್ಲ' ಎನ್ನುವಂತೆ ಇತರರನ್ನು ವಿಮರ್ಶಿಸುವ ಅಭ್ಯಾಸವಿರುವ ಹಿಂದೂಗಳು ಒಬ್ಬ ಸಿದ್ಧಾಂತಕರ್ತನಾದ ನನ್ನನ್ನು ಕೂಡಾ ವಿಮರ್ಶಿಸಿದ್ದಾರೆ. ಅನೇಕಸಲ ವಿಮರ್ಶಿಸುವುದೇ ಅಲ್ಲದೆ ನಮ್ಮ ಭಕ್ತರನ್ನು ಬೆದರಿಸುವುದು, ದಾಳಿಗಳು ಮಾಡುವುದು ಕೂಡಾ ಮಾಡಿದ್ದಾರೆ. ಅವರು ಅಷ್ಟುಮಾತ್ರ ಮಾಡಿದರೆ ನಾನು ಸ್ವಲ್ಪವಾದರೂ ಮಾಡಬೇಕಲ್ಲವೆ! ನಾನು ಏನೂ ಕೆಡಕು ಮಾಡದೆ ಅವರ ಒಳಿತನ್ನು ಕೋರಿ ಅವರ ಮಾತುಗಳಲ್ಲಿನ ಅಜ್ಞಾನ ಇದುಯೆಂದು ತೋರಿಸುತ್ತಾ,

ಇದು ಸರಿಯಾದ ಜ್ಞಾನವೆಂದು ತಿಳಿಹೇಳಿದ್ದೇವೆ. ಹಾಗೆ ಒಳಿತನ್ನು ಹೇಳುವುದೇ ಈ ಚಿಕ್ಕ ಗ್ರಂಥದಲ್ಲಿದೆ. ಅದನ್ನು ನೋಡಿದವರೆಲ್ಲರೂ ವಾಸ್ತವಜ್ಞಾನವನ್ನು ತಿಳಿಯಬಲ್ಲರೆಂದು ಆಶಿಸೋಣ.

ಇಲ್ಲಿ ಒಂದು ಹಿಂದೂ ಸಮಾಜದಲ್ಲಿನ ವ್ಯಕ್ತಿ ಕ್ರೈಸ್ಥವ ಸಮಾಜದಲ್ಲಿನ ಮನುಷ್ಯನನ್ನು ಆಧ್ಯಾತ್ಮಿಕ ಪ್ರಶ್ನೆ ಕೇಳುವುದು ನಡೆದಿದೆ. ಹಾಗೆ ಕೇಳುವುದಕ್ಕೆ ಕಾರಣ ಏನೆಂದರೇ! ಕ್ರೈಸ್ಥರು ತಮ್ಮ ಮತಗ್ರಂಥವೆಂದು ಹೇಳಿಕೊಳ್ಳುತ್ತಿರುವ ' ಬೈಬಲ್ ಗ್ರಂಥದಲ್ಲಿರುವ ಜ್ಞಾನವನ್ನು ತಿಳಿಯದಂತೆ, ತಮ್ಮ ಗ್ರಂಥದಲ್ಲಿ ಸಂಪೂರ್ಣ ಜ್ಞಾನವನ್ನು ತಿಳಿಯದಂತೆ, ತಮ್ಮ ಮತವನ್ನು ವ್ಯಾಪ್ತಿ ಮಾಡಬೇಕೆನ್ನುವ ಕೋರಿಕೆಯಿಂದ ಮತ ಪ್ರಚಾರ ಮಾಡುತ್ತಿದ್ದಾರೆ. ಅವರ ಮತ ಪ್ರಚಾರದಿಂದ ಹಿಂದೂಗಳು ಉತ್ತರಾಂಧ್ರದಲ್ಲಿ ಶೇ. 80 ರಷ್ಟು ಮಂದಿ ಕ್ರೈಸ್ಥರಾಗಿ ಬದಲಾಗಿಹೋಗಿದ್ದಾರೆ. ದಕ್ಷಿಣ ಆಂಧ್ರದಲ್ಲಿ ಶೇ. 30 ರಷ್ಟು ಮಂದಿ ಕ್ರೈಸ್ಥರಾಗಿ ಬದಲಾಗಿಹೋಗಿದ್ದಾರೆ. ಇದನ್ನನುಸರಿಸಿ ನೋಡಿದರೆ ಶೇ. 30 ರಿಂದ 80 ರಷ್ಟರವರೆಗು ಹಿಂದೂಗಳು ಕ್ರೈಸ್ಥರಾಗಿ ಬದಲಾಗಿಹೋಗುವುದು ನಡೆದಿದೆ. ಸ್ಥಳೀಯ ಪ್ರಭಾವವನ್ನನುಸರಿಸಿ ಒಂದೊಂದು ಕಡೆ ಒಂದೊಂದು ವಿಧವಾಗಿ ಬದಲಾಗಿಹೋಗುತ್ತಿದ್ದಾರೆ. ಇದನ್ನು ನೋಡಿದ ಹಿಂದೂಗಳು ತಮ್ಮ ಮತವನ್ನು ಕಾಪಾಡಿಕೊಳ್ಳಬೇಕೆಂದು ಇತರೆ ಕುಲದವರಿಗೆ ಹೇಳಿ ಅಗ್ರಕುಲದವರು ಹಿಂದೂಮತ ರಕ್ಷಣೆ ಸಂಸ್ಥೆಗಳನ್ನು ತಯಾರು ಮಾಡಿ, ಹಿಂದೂಗಳನ್ನು ಅದರಲ್ಲಿ ಸದಸ್ಯರನ್ನಾಗಿ ಮಾಡಿದ್ದಾರೆ. ನಾಯಕರಾಗಿ ಇರುವವರೆಲ್ಲರೂ ಅಗ್ರಕುಲ ದವರಿರುವಾಗ, ಕೆಲಸ ಮಾಡುವವರೆಲ್ಲರೂ ಉಳಿದ ಕುಲದವರಿರುತ್ತಾರೆ. ಈ ಉದ್ದೇಶ ಒಳ್ಳೆಯದೇ ಆದರೆ, ಉದ್ದೇಶಕ್ಕೆ ತಕ್ಕಂತೆ ಕೆಲಸ ಮಾಡುತ್ತಿಲ್ಲ. ಕ್ರೈಸ್ಥವ ಮತ ಪ್ರಚಾರವನ್ನು ನಿಲ್ಲಿಸಬೇಕೆಂದುಕೊಳ್ಳುವುದು ಒಳ್ಳೆಯದೇ. ಆದರೆ ಹೆಚ್ಚಿನ ಮಟ್ಟದಲ್ಲಿ ತಮಗೆ ಸರಿಹೋಗದ ಹಿಂದೂಗಳು ಜ್ಞಾನ ಪ್ರಚಾರ ಮಾಡಿದರೂ, ಅದನ್ನು ಕೂಡಾ ಪರಮತ ಪ್ರಚಾರದ ಕೆಳಗೆ ಜಮಕಟ್ಟಿ ಹಿಂದೂಗಳ ಮೇಲೆಯೇ ದಾಳಿ ಮಾಡುವುದು ಹಿಂದೂ ಪ್ರಜೆಗಳಿಗು ಕೂಡಾ ಸರಿಹೋಗುತ್ತಿಲ್ಲ.

ಮೇಲ್ನೋಟಕ್ಕೆ ಕಾಣಿಸುವುದಕ್ಕೆ ಹಿಂದೂ ಮತ ರಕ್ಷಕರೆಂದು ಹೆಸರು ಇಟ್ಟುಕೊಂಡರೂ ಮತ ರಕ್ಷಣೆ ಮಾಡಿರುವುದು ಏನೂ ಇಲ್ಲ. ಹಿಂದೂಗಳು ಮತ ರಕ್ಷಕರನ್ನು ನೋಡಿ ಅಸಹ್ಯಿಸಿಕೊಂಡು ಮತವನ್ನು ಬದಲಾಯಿಸಿಕೊಂಡವರು ಕೂಡಾ ಇದ್ದಾರೆ. ತಾವು ಹಿಂದೂ ಮತ ರಕ್ಷಣೆ ಮಾಡುತ್ತಿದ್ದೇವೆಂದು ಕಾಣಿಸುವುದಕ್ಕೆ ಕ್ರೈಸ್ಥರನ್ನು ಹೇಳನವಾಗಿ ಮಾತನಾಡಿದಂತೆ, ಅವರಿಗೆ ವಿರುದ್ಧವಾಗಿ ಪ್ರಶ್ನೆಗಳು ಕೇಳಿದಂತೆ ಮಾಡುತ್ತಿದ್ದಾರೆ. ಈಗ ಕೇಳಿದ ಪ್ರಶ್ನೆಗಳು ಆ ವಿಧವಾಗಿ ಪ್ರಚಾರಕ್ಕಾಗಿ ಕೇಳಿರುವವೇ.

ನಾವು ಹಿಂದೂಗಳಾಗಿ ಇದ್ದು ಹಿಂದೂಗಳಲ್ಲಿ ಗುರುಗಳಾಗಿದ್ದು, ಗುರುಗಳಲ್ಲಿ ಸಿದ್ಧಾಂತಕರ್ತನಾಗಿರುವ ನಮ್ಮನ್ನೇ ಹಿಂದೂ ರಕ್ಷಕರೆಂದು ಹೆಸರು ಇಟ್ಟುಕೊಂಡವರು ಪರ ಮತಸ್ಥರಿಗೆ ತೊಂದರೆಗಳು ಕೊಟ್ಟಂತೆ ತೊಂದರೆಗಳನ್ನು ಕೊಟ್ಟಿದ್ದಾರೆ. ಅಂತಹವರನ್ನು ಎದುರಿಸುತ್ತಾ, ಅವರಿಗೆ ಅವರ ಪ್ರಶ್ನೆಯಲ್ಲಿನ ಅಜ್ಞಾನವನ್ನು ಎತ್ತಿ ತೋರಿಸುತ್ತಾ **'ಪ್ರಾಥಮಿಕ ಜ್ಞಾನ'** ಎನ್ನುವ ಗ್ರಂಥವನ್ನು ಬರೆದಿದ್ದೇವೆ. ಅವರು ಇತರೆ ಮತದವರನ್ನು ಕೇಳಿದ ಪ್ರಶ್ನೆಗಳನ್ನು ನಾವು ಅವರಿಗೆ ಹೇಳಿದ ಉತ್ತರಗಳನ್ನು ನೋಡಿರಿ. ಅವರ ಪ್ರಶ್ನೆಗಳು ಮೇಲ್ನೋಟಕ್ಕೆ ಎಷ್ಟು ಚೆನ್ನಾಗಿ ಕಾಣಿಸಿದರೂ ಅವರಿಗೆ ಹಿಂದೂಮತದಲ್ಲಿ ಪ್ರಾಥಮಿಕ ಜ್ಞಾನ ತಿಳಿಯದಿರುವುದರಿಂದ ಏರ್ಪಟ್ಟ ಅಜ್ಞಾನವನ್ನು ನಾವು ತೋರಿಸಿದ್ದೇವೆ. ನೀವು ಅವರ ಪ್ರಶ್ನೆಯನ್ನು, ನಮ್ಮ ಉತ್ತರವನ್ನು ನೋಡಿ ಅರ್ಥ ಮಾಡಿಕೊಳ್ಳಿ. ಒಂದುಸಲ ಅರ್ಥವಾಗದಿದ್ದರೆ ಎರಡನೆಸಲ ಶಾಸ್ತ್ರಬದ್ಧವಾಗಿ ಆಲೋಚಿಸಿರಿ. ಆಗ ಸತ್ಯ ತಿಳಿಯುತ್ತದೆ.

**ಪ್ರಾಥಮಿಕ ಜ್ಞಾನ ಇಲ್ಲದ ಹಿಂದೂಗಳ ಪ್ರಶ್ನೆ :- ದೇವರನ್ನು ನೋಡಿದವನೇ ದೇವರನ್ನು ಕುರಿತು ಹೇಳಬಲ್ಲನು. ನಿಮ್ಮಲ್ಲಿ ಯಾವ ಒಬ್ಬರಾದರೂ ನಿಮ್ಮ ದೇವರನ್ನು ನೋಡಿದ್ದೀರಾ?**

**ಪ್ರಾಥಮಿಕ ಜ್ಞಾನವಿರುವ ಹಿಂದೂಗಳ ಉತ್ತರ :-** ಈ ಪ್ರಶ್ನೆಯಲ್ಲಿ ನಿಮ್ಮಲ್ಲಿ ಯಾವೊಬ್ಬರಾದರೂ ನಿಮ್ಮ ದೇವರನ್ನು ನೋಡಿದ್ದೀರಾ? ಎನ್ನುವ ಮಾತು

ಬಹಳ ಅಭ್ಯಂತರಕರವಾಗಿದೆ. ಏಕೆಂದರೇ! ಪ್ರಪಂಚದಲ್ಲಿ ಪ್ರಜೆಗಳೆಲ್ಲರಿಗೂ, ಮತಗಳೆಲ್ಲವುಗಳಿಗೂ ದೇವರು ಒಬ್ಬನೇ ಇದ್ದಾನೆ. ಒಂದೊಂದು ಮತಕ್ಕೆ ಒಬ್ಬೊಬ್ಬ ದೇವರು ಇಲ್ಲ. ಹಾಗಿರುವಾಗ ನಿಮ್ಮ ದೇವರು ಬೇರೆ, ನಮ್ಮ ದೇವರು ಬೇರೆ ಎನ್ನುವಂತೆ ನಿಮ್ಮ ದೇವರನ್ನು ನೋಡಿದ್ದೀರಾ? ಎಂದು ಕೇಳುವುದೇ ದೊಡ್ಡ ತಪ್ಪು. ಪ್ರಶ್ನೆಯಲ್ಲಿಯೇ ತಪ್ಪು ಇರುವುದರಿಂದ ಪ್ರಶ್ನಿಸುವವರಿಗೇ ದೇವರ ಏಕತ್ವವನ್ನು ಕುರಿತು ತಿಳಿಯದೆಂದು ಅರ್ಥವಾಗುತ್ತಿದೆ. ಸರ್ವ ಪ್ರಪಂಚಕ್ಕೆ ದೇವರು ಒಬ್ಬನೆನ್ನುವುದು ಜ್ಞಾನವಾಗುತ್ತದೆ. ಬೇರೆ ಮತಕ್ಕೆ ಬೇರೆ ದೇವರಿದ್ದಾನೆನ್ನುವುದು ಅಜ್ಞಾನವಾಗುತ್ತದೆ. ಈ ಪ್ರಶ್ನೆಯಲ್ಲಿ 'ನಿಮ್ಮ ದೇವರು' ಎನ್ನುವಮಾತು ಮಾತನಾಡಿದವರು ಪೂರ್ತಿ ಅಜ್ಞಾನಿಗಳೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೆ ಈ ಪ್ರಶ್ನೆಯಲ್ಲಿ 'ದೇವರನ್ನು ನೋಡಿದವನೇ ದೇವರನ್ನು ಕುರಿತು ಮಾತನಾಡಬಲ್ಲನು' ಎಂದು ಇದೆ. ಇದರಲ್ಲಿ ಪೂರ್ತಿ ಅಜ್ಞಾನದ ಮಾತು ಇದೆ. ಅದೇನೆಂದರೇ! 'ದೇವರನ್ನು ನೋಡಿದವನು' ಎನ್ನುವುದು ಪೂರ್ತಿ ಅಜ್ಞಾನದ ಮಾತು. ದೇವರು ನಾಮ, ರೂಪ, ಕ್ರಿಯೆಗಳು ಇಲ್ಲದವನು. ದೇವರಿಗೆ ರೂಪವಿಲ್ಲ. ಆದ್ದರಿಂದ ದೇವರು ಯಾರಿಗೂ ಕಾಣಿಸುವವನಲ್ಲ. ದೇವರು ಯಾರೊಂದಿಗೆ ಮಾತನಾಡುವುದಿಲ್ಲ, ಯಾರಿಗೂ ಕಾಣಿಸುವುದಿಲ್ಲ. ಅಂತಹವನನ್ನು ನೋಡಿದ್ದೀರಾ? ಎಂದು ಕೇಳುವುದೇ ತಪ್ಪು. ದೇವರನ್ನು ನೋಡಿದವನು ದೇವರನ್ನು ಕುರಿತು ಮಾತನಾಡಬಲ್ಲನು ಎಂದು ಹೇಳಿದ್ದಾರೆ. ದೇವರನ್ನು ಕುರಿತು ಮಾತನಾಡುವವರೆಲ್ಲರೂ ದೇವರನ್ನು ನೋಡಿದ್ದೇವೆಂದುಕೊಳ್ಳುವುದು ದೊಡ್ಡ ತಪ್ಪು. ಈ ದಿನ ನೀವು ದೇವರನ್ನು ಕುರಿತು ಮಾತನಾಡುತ್ತಿದ್ದೀರ. ಅಷ್ಟುಮಾತ್ರಕ್ಕೆ ನೀವು ದೇವರನ್ನು ನೋಡಿದ್ದಾರೆಂದು ಕೊಳ್ಳುವುದು ನಮ್ಮ ತಪ್ಪಾಗುತ್ತದೆ. ಈ ದಿನ ಬಹಳಜನ ಸದ್ಗುರುಗಳು ದೇವರನ್ನು ಕುರಿತು ಬೋಧಿಸುತ್ತಿದ್ದಾರೆ. ಆದರೂ ಅವರು ಕೂಡಾ ದೇವರನ್ನು ನೋಡಿರುವುದಿಲ್ಲ. ದೈವಗ್ರಂಥಗಳಲ್ಲಿ ದೇವರನ್ನು ಕುರಿತು ದೇವರೇ ಹೇಳಿದ್ದಾನೆ. ಆದ್ದರಿಂದ ದೈವಗ್ರಂಥದಲ್ಲಿನ ದೇವರ ಜ್ಞಾನ ವಿಷಯಗಳನ್ನು ಹೇಳುತ್ತಿರುತ್ತಾರೆ. ಹಾಗೆ ದೈವಗ್ರಂಥದಲ್ಲಿನ ಮಾತುಗಳನ್ನು ದೇವರ ಮಾತುಗಳಾಗಿ ಹೇಳಬಹುದು.

ಅಷ್ಟುಮಾತ್ರಕ್ಕೆ ದೇವರನ್ನು ನೋಡಿದವರೇ ಮಾತನಾಡುತ್ತಾರೆ ಎಂದುಕೊಳ್ಳುವುದು ದೊಡ್ಡ ಪೊರಪಾಟು. ಅವರನ್ನು ಪ್ರಶ್ನಿಸಿದವರು ಯಾರಾದರೂ ದೇವರನ್ನು ನೋಡಿದ್ದೀರಾ? ಎಂದು ಕೇಳಿದರೆ ಅವರು ಕೂಡಾ ಎಲ್ಲಿಯೂ ನೋಡಲಿಲ್ಲ. ಹಾಗಿರುವಾಗ ಆ ಪ್ರಶ್ನೆ ಕೇಳುವುದೇ ದೊಡ್ಡ ತಪ್ಪು. ನಿಜವಾದ ಹಿಂದೂ (ಇಂದೂ) ದೇವರನ್ನು ಕುರಿತಾದ ಜ್ಞಾನ ತಿಳಿದಿರುತ್ತಾನೆ. ಆದ್ದರಿಂದ ಇಂದೂ (ಜ್ಞಾನಿ) ಯಾರೂ ಆ ಪ್ರಶ್ನೆ ಕೇಳುವುದಿಲ್ಲ. ಇಂತಹ ಪ್ರಶ್ನೆಗಳನ್ನು ಕೇಳಿ ಉಳಿದ ಮತಗಳ ಮುಂದೆ ನಿಜವಾದ ಇಂದೂತ್ವವನ್ನು ಕಡಿಮೆ ಮಾಡಬೇಡಿರಿ. ಮೊದಲು ನೀವು ಜ್ಞಾನಿಗಳಾಗಿ ಬದಲಾಗಿರಿ.

**ಅವರ ಪ್ರಶ್ನೆ :– ನಮ್ಮ ಮತದಲ್ಲಿ ರಾಮಕೃಷ್ಣ ಪರಮಹಂಸ "ದೇವರನ್ನು ನೋಡಿದ್ದೇನೆ, ನಿನಗು ಕೂಡಾ ತೋರಿಸುತ್ತೇನೆ" ಎಂದು ವಿವೇಕಾನಂದನಿಗೆ ಹೇಳಿದ್ದಾನೆ. ಹಾಗೆ ನಿಮ್ಮ ಮತದಲ್ಲಿ ಯಾರಾದರೂ ಹೇಳಿದ್ದಾರಾ?**

**ನಮ್ಮ ಉತ್ತರ :–** ಯಾವ ಮತದಲ್ಲಿಯೂ ಸಾಧಾರಣ ಮನುಷ್ಯನಾಗಲಿ, ದೊಡ್ಡ ಜ್ಞಾನಿಗಳಾಗಲಿ, ಉನ್ನತವಾದ ಗುರುಗಳಾಗಲಿ ಯಾರೂ ದೇವರನ್ನು ನೋಡಲಿಲ್ಲ. ನಂತರ ಕಾಲದಲ್ಲಿ ಕೂಡಾ ನೋಡುವುದಿಲ್ಲ. ಏಕೆಂದರೇ! ದೇವರು ಕಾಣಿಸುವವನಲ್ಲ. ರಾಮಕೃಷ್ಣ ಪರಮಹಂಸನನ್ನು ಕುರಿತು ಆತನು ನೋಡಿದ್ದಾನೆಂದು, ಆ ವಿಷಯವನ್ನು ಆತನೇ ಹೇಳಿದ್ದಾನೆಂದು ನೀವು ಹೇಳುತ್ತಿದ್ದೀರಾ. ವಿವೇಕನಂದನ ವಿಷಯವಾಗಲಿ, ರಾಮಕೃಷ್ಣ ಪರಮಹಂಸನ ವಿಷಯವಾದರೂ ಪ್ರಜೆಗಳಿಗೆ ಬಹಳ ನಂಬಿಕೆ. ವಿವೇಕನಂದನು ತನಗೆ ಗುರು ಬೇಕೆಂದು, ತನ್ನ ಗುರು ದೇವರನ್ನು ನೋಡಿದವನಾಗಿರ ಬೇಕೆಂದು ತಿಳಿದು. ಬಹಳಜನ ಗುರುಗಳ ಹತ್ತಿರಕ್ಕೆ ಹೋಗಿ ನೀವು ದೇವರನ್ನು ನೋಡಿದ್ದೀರಾ? ಎಂದು ಪ್ರಶ್ನಿಸಿದಾಗ ಅವರು ಯಾರೂ ನೋಡಿದ್ದೇನೆಂದು ಹೇಳಲಿಲ್ಲ. ಹಾಗೆ ಕಂಡ ಗುರುವನ್ನು ಕೇಳುತ್ತಾ ಬಂದಿದ್ದಾನೆ. ಹಾಗೆಯೇ ರಾಮಕೃಷ್ಣ ಪರಮಹಂಸ ಗುರುವಾಗಿ ಇದ್ದಾನೆಂದು ತಿಳಿದು, ಆತನ ಹತ್ತಿರಕ್ಕೆ ಬಂದು ಅದೇ ಪ್ರಶ್ನೆಯನ್ನು ಕೇಳಿದ್ದಾನೆ. ಆಗ ರಾಮಕೃಷ್ಣ ಪರಮಹಂಸರು "ನಾನು ನೋಡಿದ್ದೇನೆ, ನಿನಗೂ

ಕೂಡಾ ತೋರಿಸುತ್ತೇನೆ". ಎಂದು ಹೇಳಿದ್ದಾನೆ. ಆಗ ವಿವೇಕಾನಂದನು ತೃಪ್ತಿಹೊಂದಿ ಆತನ ಹತ್ತಿರ ಶಿಷ್ಯನಾಗಿ ಸೇರಿದ್ದಾನೆ. ರಾಮಕೃಷ್ಣ ಪರಮಹಂಸ ಮರಣಿಸುವವರೆಗು ವಿವೇಕಾನಂದನು ಅಲ್ಲಿಯೇ ಇದ್ದರೂ, ಒಂದು ದಿನಕೂಡಾ ಆತನು ಹೇಳಿದಂತೆ ದೇವರನ್ನು ವಿವೇಕಾನಂದನಿಗೆ ತೋರಿಸಲಿಲ್ಲ. ದೇವರನ್ನು ತೋರಿಸದೇ ಗುರುಗಳು ಮರಣಿಸಿದ್ದಾರೆ. ಆಗ ವಿವೇಕಾನಂದನು ತಮ್ಮ ಗುರು ನನ್ನ ಬಳಿ ಹೇಳಿರುವುದು ಅಸತ್ಯವೆಂದು ಆತನಿಗೆ ಅರ್ಥವಾಗಿದೆ. ರಾಮಕೃಷ್ಣ ಪರಮಹಂಸ ಮರಣಿಸಿದ ನಂತರ ಆತನ 16 ದಿನಗಳ ಪೂಜೆಯಲ್ಲಿ ವಿವೇಕಾನಂದನು ಹಾಜರಾಗಲಿಲ್ಲ. ಸಹ ಪಾಠಿಗಳು ಕರೆದರೂ ಹೋಗದಂತೆ ಹೊರಗೆ ಇದ್ದಾನೆ. ಕೆಲವು ಸಂದರ್ಭಗಳಲ್ಲಿ ತಮ್ಮ ಗುರು ಮಾನಸಿಕ ರೋಗಿಯೆಂದು, ಮತಿಸ್ಥಿಮಿತವಿಲ್ಲದ ಹುಚ್ಚನೆಂದು ಹೇಳಿದ್ದಾನೆ. ಆತನ ಚರಿತ್ರೆ ತಿಳಿದವರಿಗೆ ರಾಮಕೃಷ್ಣರವರು ದೇವರನ್ನು ನೋಡಲಿಲ್ಲ ಎಂದು ತಿಳಿಯುತ್ತಿರು ವಾಗ! ನೀವು ಕುರುಡರಂತೆ ಆತನು ನೋಡಿದ್ದಾನೆ ಎನ್ನುವುದು ಪೊರಪಾಟಲ್ಲವೇ!

**ಅವರ ಪ್ರಶ್ನೆ:– ಮತ ಪ್ರಚಾರ, ಮತ ಮಾರ್ಪಿಡಿ ಒಂದು ವಿಧವಾದ ರಾಜಕೀಯವೆಂದು ನಿಮಗೆ ತಿಳಿದಿದೆಯಾ?**

**ನಮ್ಮ ಉತ್ತರ :–** 'ಕೀಯ' ಎನ್ನುವ ಮಾತು 'ಕ್ರಿಯೆ' ಎನ್ನುವ ಪದದಿಂದ ಹುಟ್ಟಿದೆ. ಕ್ರಿಯೆ ಎಂದರೇ ಕೆಲಸ. ಹಾಗೆ ಕೀಯ ಎಂದರೂ ಕೆಲಸವೆಂದು ಅರ್ಥ. 'ರಾಜ' ಎಂದರೇ 'ದೊಡ್ಡದು' ಎಂದು ಅರ್ಥ. 'ರಾಜಕೀಯ' ಎಂದರೇ 'ದೊಡ್ಡ ಕೆಲಸ' ಎಂದು ಅರ್ಥ. ಮತಾಂತರ ದೊಡ್ಡ ಕಾರ್ಯ ಎನ್ನುವಮಾತನ್ನು ಸೂಚಿಸುವುದಿಲ್ಲ. ಮತಾಂತರ ನೀಚವಾದ ಕೆಲಸ. ಆದ್ದರಿಂದ ಅದನ್ನು ರಾಜಕೀಯ ಎಂದು ಎನ್ನಬಾರದು. ಅದು ಸತ್ಯವಾಗಿ ನೀಚಕೀಯವೇ ಆಗುತ್ತದೆ. ಮತಾಂತರವನ್ನು ನೀಚಕೀಯ ಎಂದು ಹೇಳಬಹುದು. ಅಷ್ಟೇಹೊರತು ರಾಜಕೀಯ ಎನ್ನುವುದು ದೊಡ್ಡ ಪೊರಪಾಟು. ನಿಮ್ಮ ಲೆಕ್ಕದಲ್ಲಿ ಮತಾಂತರ ರಾಜಕೀಯ ಆಗಿರಬಹುದು. ನಮ್ಮ ಲೆಕ್ಕದಲ್ಲಿ ನೀಚಕೀಯವೆಂದು ಹೇಳುತ್ತಿದ್ದೇವೆ. ನಿಮ್ಮ ಪ್ರಶ್ನೆಗೆ ಉತ್ತರವಾಗಿ ಮತಾಂತರ ನೀಚಕೀಯವೆಂದು ನಿಮಗೆ ತಿಳಿದಿಲ್ಲವಾ!

ಎಂದು ಹೇಳುತ್ತಿದ್ದೇವೆ. ಪ್ರಶ್ನೆ ಕೇಳುವುದು ಮುಖ್ಯವಲ್ಲ. ಪ್ರಶ್ನೆ ಸರಿಯಾದುದೋ, ಅಲ್ಲವೊ ಮೊದಲು ನೋಡಿಕೊಳ್ಳಿ.

**ಅವರ ಪ್ರಶ್ನೆ :– ಹಿಂದೂ ಮತಕ್ಕೆ ಪ್ರಮಾಣಿಕ ಗ್ರಂಥಗಳು ವೇದಗಳು, ಉಪನಿಷತ್ತಗಳು, ಬ್ರಹ್ಮಸೂತ್ರಗಳು, ಭಗವದ್ಗೀತೆಯೆಂದು ನಿಮಗೆ ತಿಳಿದಿದೆಯಾ?**

**ನಮ್ಮ ಉತ್ತರ :–** ಇತರೆ ಮತಗಳನ್ನು ಪ್ರಶ್ನಿಸುತ್ತಿರುವಾಗ ಇಂತಹ ಪ್ರಶ್ನೆಗಳನ್ನು ಕೇಳಬಾರದು. ಅವರನ್ನು ಕೇಳಿದರೇ ಅವರು ಉತ್ತರ ಹೇಳಲಾರದ ಪ್ರಶ್ನೆಗಳು ಎಷ್ಟೋ ಇವೆ. ಹಾಗೆ ಕೇಳದಂತೆ ನಮ್ಮ ಪ್ರಶ್ನೆಗೆ ನಾವೇ ಉತ್ತರ ಹೇಳಲಾರದ ವಿಧವಾಗಿ ಕೇಳಿದರೆ ಅದು ನಮಗೇ ಅವಮಾನಕರವಾಗಿ ಇರುತ್ತದೆ. ಹಿಂದೂ ಮತಕ್ಕೆ ಪ್ರಾಮಾಣಿಕ ಗ್ರಂಥ ಎಂದಿಗಾದರೂ ಒಂದೇ ಇರುತ್ತದೆ. ಬಹಳಜನ ವೇದಗಳು ಪ್ರಾಮಾಣಿಕ ಗ್ರಂಥಗಳೆಂದು ಅಂದುಕೊಳ್ಳುತ್ತಿದ್ದಾರೆ. ದ್ವಾಪರ ಯುಗದಲ್ಲಿ ವ್ಯಾಸನಿಂದ ಗ್ರಂಥರೂಪವಾದ ವೇದಗಳನ್ನು ಹಿಂದೂಗಳು ಎಲ್ಲರೂ ಪ್ರಾಮಾಣಿಕ ಗ್ರಂಥಗಳೆಂದು ಅಂದುಕೊಳ್ಳುವುದರಿಂದ, ದೇವರು ಅಧರ್ಮಗಳು ಹೆಚ್ಚಾಗಿ ಹೋಗಿವೆಯೆಂದು ತಿಳಿದು, ಅವುಗಳನ್ನು ರೂಪ ಇಲ್ಲದಂತೆ ಮಾಡುವುದಕ್ಕೆ ಆತನು ಭಗವಂತನಾಗಿ ಅವತರಿಸಿ ಭಗವದ್ಗೀತೆಯನ್ನು ಹೇಳಿ ಭಗವದ್ಗೀತೆ ಯಲ್ಲಿಯೇ **"ತ್ರೈಗುಣ್ಯ ವಿಷಯಾ ವೇದಾ"** ಮೂಡು ಗುಣಗಳ ವಿಷಯಗಳೇ ನಾಲ್ಕು ವೇದಗಳು ಎಂದು ಹೇಳಿದ್ದಾನೆ. ಆ ಮಾತನ್ನನುಸರಿಸಿ ವೇದಗಳು ಮೂರು ಗುಣ ರೂಪಗಳೆಂದು ತಿಳಿಯುತ್ತಿದೆ. ಒಂದುಕಡೆ **"ಗುಣಮಯಿ ಮಮ ಮಾಯಾ"** ಎಂದು ಇದೆ. ಇದನ್ನನುಸರಿಸಿ ಗುಣಗಳೇ ಮಾಯೆಯಾಗಿ ಇವೆಯೆಂದು, ಮಾಯೆಯೆಂದು ಹೇಳಲ್ಪಡುತ್ತಿವೆಯೆಂದು ತಿಳಿಯುತ್ತಿದೆ. ವೇದಗಳು ಗುಣಗಳ ವಿಷಯಗಳಾಗಿದ್ದು, ಗುಣಗಳು ಮಾಯೆ ಆಗಿದ್ದು! ವೇದಗಳನ್ನು ಕೂಡಾ ಮಾಯೆಯೆಂದು ಹೇಳಬಹುದು. ಮಾಯೆಯಾಗಿರುವ ವೇದಗಳು ಹಿಂದೂಮತಕ್ಕೆ ಪ್ರಾಮಾಣಿಕ ಗ್ರಂಥಗಳು ಎಂದರೇ ನಮ್ಮ ಮುಖಕ್ಕೆ ನಾವೇ ಮಸಿ ಬಳಿದುಕೊಂಡಂತಿರುತ್ತದೆ. ಆದ್ದರಿಂದ ಹಿಂದೂ ಧರ್ಮಗಳನ್ನು ತಿಳಿಸಿದ ಭಗವದ್ಗೀತೆಯನ್ನು ಹಿಂದೂಗಳ ಪ್ರಮಾಣಿಕ ಗ್ರಂಥವಾಗಿ ಹೇಳಬಹುದು ಹೊರತು ಉಳಿದ ಗ್ರಂಥಗಳನ್ನು ಹೇಳಬಾರದು.

ಯಾವ ಮತಕ್ಕಾದರೂ ಪ್ರಾಮಾಣಿಕ ಗ್ರಂಥ ಒಂದೇ ಇರುತ್ತದೆ. ವಾಸ್ತವವಾಗಿ ಆ ಮತಕ್ಕೆ, ಆ ಗ್ರಂಥಕ್ಕೆ ಏನು ಸಂಬಂಧ ಇರುವುದಿಲ್ಲ. **"ದೇವರು ಮೂರು ವಿಧಗಳ ತನ್ನ ಜ್ಞಾನವನ್ನು ತಿಳಿಸುತ್ತೇನೆಂದು"** ಮೊದಲೇ ಹೇಳಿದ್ದಾನೆ. ದೇವರ ಜ್ಞಾನ ಸೃಷ್ಠಿ ಆದಿಯಲ್ಲಿ ಆಕಾಶವಾಣಿಯಿಂದ ಹೇಳಲ್ಪಟ್ಟಿದೆ. ಆಕಾಶವಾಣಿ ಯಿಂದ ಹೇಳಲ್ಪಟ್ಟ ಜ್ಞಾನವೇ ಮೊದಲು ಭಗದ್ಗೀತೆಯಾಗಿ ತಯಾರಾಗಿದೆ. ನಂತರ ಎರಡು ಗ್ರಂಥಗಳಾಗಿ ಕಾಲಕ್ರಮದಲ್ಲಿ ರೂಪತಿದ್ದು ಕೊಂಡಿವೆ. ನಂತರ ತಯಾರಾದ ಎರಡು ಗ್ರಂಥಗಳಲ್ಲಿಯೂ ಮೊದಲು ಹೇಳಿದ ಭಗವದ್ಗೀತೆ ಜ್ಞಾನವೇ ಇದೆ. ಸಾರಾಂಶ ಜ್ಞಾನವೆಲ್ಲವೂ ಭಗವದ್ಗೀತೆಯದಾಗಿದ್ದು, ಉಳಿದ ಕೆಲವು ವಿಷಯಗಳು ಅಲ್ಲಿ ಭಗವದ್ಗೀತೆಯಲ್ಲಿ ಹೇಳದಿರುವವು ಶೇ. ಐದರಷ್ಟು ಶಾತ ಉಳಿದ ಎರಡು ಗ್ರಂಥಗಳಲ್ಲಿ ಹೇಳಲ್ಪಟ್ಟಿರುತ್ತದೆ. ಮುಖ್ಯವಾದ ಸಾರಾಂಶ ಜ್ಞಾನವೆಲ್ಲವೂ ಎರಡು ಗ್ರಂಥಗಳಲ್ಲಿ ಒಳಗೊಂಡಿರುತ್ತದೆ. ಭಗವದ್ಗೀತೆ ಯಲ್ಲಿ ಹೇಳಿದಮಾತೇ ಉಳಿದ ಎರಡು ಗ್ರಂಥಗಳಲ್ಲಿ ಬರೆಯಲ್ಪಟ್ಟಿದ್ದರೂ ಭಾಷೆ ಬದಲವಣೆಯಿಂದ, ಪದಗಳ ಬದಲಾವಣೆಯಿಂದ ಭಗವದ್ಗೀತೆಯಲ್ಲಿ ಹೇಳಿದ ಮಾತು ಮತ್ತೊಂದು ಗ್ರಂಥಗಳಲ್ಲಿ ಪ್ರತ್ಯಕ್ಷವಾಗಿ ಇದ್ದರೂ ಅದು ಗುರುತಿಸದ್ದಾಗಿದೆ. ಉದಾಹರಣೆಗೆ ಭಗವದ್ಗೀತೆ ಮೋಕ್ಷ ಸನ್ಯಾಸ ಯೋಗದಲ್ಲಿ 17ನೇ ಶ್ಲೋಕದಲ್ಲಿ **"ಯಾರ ಭಾವನೆಯಲ್ಲಿ ಅಹಂಕಾರ ಇಲ್ಲವೋ ಅವನು ಇತರರನ್ನು ಸಾಯಿಸಿದರೂ ಅವನಿಗೆ ಪಾಪ ಅಂಟುವುದಿಲ್ಲ. ಅವನು ಹಂತಕನಲ್ಲ"** ಎಂದು ಹೇಳಲ್ಪಟ್ಟಿದೆ. 'ಅಹಂಕಾರ ಇಲ್ಲದೇ' ಅಂದರೇ ನಾನು ಮಾಡುತ್ತಿದ್ದೇನೆ ಎಂದು ಅಂದುಕೊಳ್ಳದೇ ಯಾವ ಕೆಲಸವನ್ನು ಮಾಡಿದರೂ ಅದು ಅವನು ಮಾಡಿದಂತೆ ಲೆಕ್ಕಿಸಲ್ಪಡುವುದಿಲ್ಲ. ಇದು ಆಧ್ಯಾತ್ಮಿಕ ಕಾನೂನಿನ ಪ್ರಕಾರ ಅವನು ಮಾಡಿದವನಲ್ಲ ಎಂದು ಹೇಳಲ್ಪಟ್ಟಿದೆ. ಆದರೇ ಅದೇ ವಾಕ್ಯವೇ ಅಂದರೇ ಅದೇ ಭಾವವಿರುವ ವಾಕ್ಯವೇ 'ಇಂಜೀಲು' ಎನ್ನುವ ದೈವಗ್ರಂಥದಲ್ಲಿ ಹೇಳಿದಾಗ ಇನ್ನೊಂದು ವಿಧವಾಗಿ ಕಾಣಿಸುತ್ತಿದೆ. ಇಂಜೀಲು ಗ್ರಂಥದಲ್ಲಿ **"ಒಬ್ಬ ಮನುಷ್ಯ ಇನ್ನೊಬ್ಬ ಸ್ತ್ರೀಯನ್ನು ಮೋಹದ ದೃಷ್ಠಿಯಿಂದ ನೋಡಿದಾಗ ಆತನು ಆ ಕ್ಷಣವೇ ಆಕೆಯೊಂದಿಗೆ ವ್ಯಭಿಚಾರಿಸಿದವನಾಗುತ್ತಾನೆ. ಆ ಕೆಲಸ ಮಾಡಿದ ಪಾಪ ಆತನಿಗೆ ಅಂಟಿಕೊಳ್ಳುತ್ತದೆ"**

ಎಂದು ಇದೆ. ಭಗವದ್ಗೀತೆಯಲ್ಲಿ ಹೇಳಿದ ಮಾತಿಗೆ, ಇಂಜೀಲು ನಲ್ಲಿ ಹೇಳಿದ ಮಾತಿಗೆ ಸ್ವಲ್ಪವೂ ಹೊಂದಾಣಿಕೆ ಇಲ್ಲದಂತೆ ಕಾಣಿಸಿದರೂ, ಎರಡೂ ಒಂದೇ ಅರ್ಥ ಹೊಂದಿರುವವಾಗಿ ತಿಳಿಯುತ್ತಿದೆ. ಅಲ್ಲಿ ಅಹಂಕಾರ ಇಲ್ಲದವನು ಮಾಡಿದರೂ ಮಾಡದಂತೆ ಆದಾಗ, ಅದೇ ಕಾನೂನಿನ ಪ್ರಕಾರ ಅಹಂಕಾರ ಇಲ್ಲದವನು ಮಾಡದಿದ್ದರೂ ಮಾಡದಂತೆ, ಅದೇ ಕಾನೂನಿನ ಪ್ರಕಾರ ಅಹಂಕಾರ ಇರುವವನು ಮಾಡದಿದ್ದರೂ ಅಂದುಕೊಳ್ಳುವುದರಿಂದ ಮಾಡಿದಂತೇ ಆಗುತ್ತಿದೆ. ಈ ಎರಡು ವಾಕ್ಯಗಳು ಒಂದೇ ಆದರೂ ಯಾರೂ ಗುರುತಿಸಲಾರದಂತೆ ಇವೆ. ಈ ವಿಧವಾಗಿ ಭಗವದ್ಗೀತೆ ವಾಕ್ಯಗಳೇ ಉಳಿದ ಎರಡು ಗ್ರಂಥಗಳಲ್ಲಿ ಬೇರೆ ವಿಧವಾಗಿ ಹೇಳಲ್ಪಟ್ಟಿವೆ.

ಹಿಂದೂಗಳಿಗೆ ಭಗವದ್ಗೀತೆ ಪ್ರಾಮಾಣಿಕ ಗ್ರಂಥ ಆಗುವುದರಿಂದ ಅದೇ ಉಳಿದ ಎರಡು ಮತಗಳಿಗು ಕೂಡಾ ಪ್ರಾಮಾಣಿಕವೇ ಎಂದು ಹೇಳಬಹುದು. ಉಳಿದ ಮತದವರಿಗೆ ಅವರ ಗ್ರಂಥಗಳು ಪ್ರಾಮಾಣಿಕವಾಗಿದ್ದರೂ, ಅದರೊಳಗಿರುವುದು ಭಗವದ್ಗೀತೆ ಜ್ಞಾನವೇ ಆಗಿರುವುದರಿಂದ, ಈ ಜ್ಞಾನವೇ ಅಲ್ಲಿ ಅವರಿಗೆ ಬೇರೆಬೇರೆ ಹೆಸರುಗಳಿಂದ ಪ್ರಾಮಾಣಿಕವಾಗಿದೆಯೆಂದು ಹೇಳಬಹುದು. ಕೆಲವರು ಭಗವದ್ಗೀತೆಗೆ ವಿರುದ್ಧ ಜ್ಞಾನ ಅವರ ಮತದಲ್ಲಿ ಇದೆಯೆಂದು ಹೇಳಿದರೂ ಹಾಗೆ ಎಲ್ಲಿಯೂ ಇಲ್ಲ. ಅವರು ದೇವರು ಹುಟ್ಟುವುದಿಲ್ಲವೆಂದು ಹೇಳಿದರೂ ಆ ಮಾತು ವಾಸ್ತವವಲ್ಲ. ಅವರ ಗ್ರಂಥದಲ್ಲಿ ಎಲ್ಲಿಯೂ ದೇವರು ಹುಟ್ಟುವುದಿಲ್ಲವೆಂದು ಇಲ್ಲ. ದೇವರು ಅವತರಿಸುತ್ತಾನೆಂದು ಅವರ ಗ್ರಂಥದಲ್ಲಿಯೇ ಎರಡು ಕಡೆ ಹೇಳಲ್ಪಟ್ಟಿದೆ. ದೇವರು ಹುಟ್ಟುವುದಿಲ್ಲವೆಂದು ಹೇಳಿರುವುದು ಅವರ ಹಿರಿಯರು ಹೇಳಿದ ಮಾತೇ ಹೊರತು ಗ್ರಂಥದಲ್ಲಿ ಇರುವ ಮಾತಲ್ಲ. ಈ ವಿಧವಾಗಿ ಲೆಕ್ಕಿಸಿ ನೋಡಿದರೆ ಅವರ ಗ್ರಂಥಗಳ ಹೆಸರು ಬೇರೆಯಾದರೂ ಜ್ಞಾನ ಒಂದೇ ಆಗುವುದರಿಂದ, ಅವರಿಗೆ ಪ್ರಾಮಾಣಿಕ ಗ್ರಂಥಗಳು ಪ್ರತ್ಯಕ್ಷವಾಗಿ ಅವರವೇ ಆದರೂ, ಪರೋಕ್ಷವಾಗಿ ಭಗವದ್ಗೀತೆ ಆಗುತ್ತದೆ. ಭಗವದ್ಗೀತೆ ಜ್ಞಾನವೇ ಉಳಿದ ಎರಡು ಗ್ರಂಥಗಳಿಗು ಆಧಾರವಾಗಿದೆ

ಯೆಂದು ಖುರಾನ್ ಗ್ರಂಥದಲ್ಲಿ **ಸೂರಾ 5ರಲ್ಲಿ ಆಯತ್‌ಗಳು 44, 46, 48, 68ರಲ್ಲಿ** ಹೇಳುವುದೇ ಅಲ್ಲದೇ **(62–5)** ರಲ್ಲಿ ಭಗವದ್ಗೀತೆಯನ್ನು (ತೌರತ್‌ನ್ನು) ಓದದವನು, ಅನುಸರಿಸದವನು ಉಳಿದ ಎಷ್ಟು ಗ್ರಂಥಗಳು ಓದಿದರೂ, ಅಂತಹವನು ಎಷ್ಟೋ ಗ್ರಂಥಗಳನ್ನು ಬೆನ್ನಿನಮೇಲೆ ಹೊರುವ ಕತ್ತೆಯಂತ ಹವನೆಂದು ಉಪಮಾನವನ್ನು ಹೇಳಿದ್ದಾರೆ. ಇನ್ನೂ **(2–89), (10–37), (5–43)** ರಲ್ಲಿ ಕೂಡಾ ಭಗವದ್ಗೀತೆಯನ್ನು ಕುರಿತು ಹೇಳಿದ್ದಾರೆ. ಅಲ್ಲಿ ಅವರು ಭಗವದ್ಗೀತೆಯನ್ನು ತೌರಾತ್‌ಯೆಂದು ಹೇಳಿದ್ದಾರೆ. **'ತೌರಾತು ಗ್ರಂಥ ಎಂದರೇ ಭಗವದ್ಗೀತೆ'** ಎಂದು ಬಹಳ ಜನರಿಗೆ ತಿಳಿದಿಲ್ಲ. ತಮ್ಮ ಗ್ರಂಥಗಳಿಗಿಂತ ಮೊದಲು ಬಂದಿರುವುದು ತೌರಾತ್ ಗ್ರಂಥ ಎಂದು ಹೇಳುತ್ತಿದ್ದಾರೆ. ಉಳಿದ ಎರಡು ಮತಗಳಲ್ಲಿಯೂ ಶಾಸ್ತ್ರಬದ್ಧವಾಗಿ ಭಗವದ್ಗೀತೆಯಲ್ಲಿನ ವಾಕ್ಯಗಳೇ ಬೇರೆ ವಿಧವಾಗಿ ಹೇಳಿದ್ದಾರೆ. ಯಾವ ವಿಧವಾಗಿ ನೋಡಿದರೂ ಒಂದು ಹಿಂದೂಮತಕ್ಕೇ ಭಗವದ್ಗೀತೆ ಪ್ರಾಮಾಣಿಕ ಗ್ರಂಥವೆಂದು ಹೇಳಲಾರೆವು. ಉಳಿದ ಎರಡು ಮತಗಳಿಗು ಕೂಡಾ ಭಗವದ್ಗೀತೆ ಪರೋಕ್ಷವಾಗಿ ಪ್ರಾಮಾಣಿಕ ಗ್ರಂಥವಾಗಿ ಇದೆಯೆಂದು, ಇದು ಎಲ್ಲರಿಗೂ ತಿಳಿಯದ ಸತ್ಯವೆಂದು ಹೇಳಬಹುದು. ತೌರಾತ್ ಗ್ರಂಥ ಎಂದರೇ ಭಗವದ್ಗೀತೆಯೆಂದು ಕ್ರೈಸ್ಥರಿಗು, ಮುಸ್ಲಿಮ್‌ರಿಗು ತಿಳಿದಿಲ್ಲ. ಹಾಗೇ ಭಗವದ್ಗೀತೆಯ ಹೆಸರೇ ತೌರಾತ್ ಎಂದು, ಅದು ಸ್ವಂತಃವಾಗಿ ಶ್ರೀಕೃಷ್ಣ ಭಗವಾನ್ ಇಟ್ಟಿರುವ ಹೆಸರೆಂದು ಹಿಂದೂಗಳಿಗು ಕೂಡಾ ತಿಳಿದಿಲ್ಲ.

**ಅವರ ಪ್ರಶ್ನೆ :– 'ಯೇಸು ಪಾಪಿಗಳನ್ನು ರಕ್ಷಿಸುತ್ತಾನೆ' ಎಂದು ಹೇಳಿದ್ದಾರೆ. ಕೃಷ್ಣನು ಭಗವದ್ಗೀತೆಯಲ್ಲಿ "ಪರಿತ್ರಾಣಾಯ ಸಾಧೂನಾಂ" ಎಂದು ಹೇಳಿದ್ದಾನೆ. ಯಾವುದು ಒಳ್ಳೆಯದೊ ನೀವೆ ನೋಡಿರಿ. ಸನ್ಮಾರ್ಗರನ್ನು, ಸಾಧುಗಳನ್ನು ನಮ್ಮ ದೇವರು ರಕ್ಷಿಸಿದರೆ ದುರ್ಮಾರ್ಗರನ್ನು, ಪಾಪಿಗಳನ್ನು ಅವರ ದೇವರು ರಕ್ಷಿಸುತ್ತಾನೆ. ಇದು ಕೆಡಕನ್ನು ಪ್ರೋತ್ಸಾಹಿಸಿದಂತೆ ಅಲ್ಲವೇ! ನಮ್ಮ ದೇವರಿಗು ಅವರ ದೇವರಿಗು ಎಷ್ಟು ವ್ಯತ್ಯಾಸ ಇದೆಯೋ ನೋಡಿದ್ದೀರಾ?**

**ನಮ್ಮ ಉತ್ತರ :–** ಪ್ರಾಥಮಿಕ ಜ್ಞಾನ ತಿಳಿದರೆ ಎರಡು ಮಾತುಗಳಲ್ಲಿ ಸ್ವಲ್ಪವೂ

ವ್ಯತ್ಯಾಸವಿಲ್ಲ. ಇದೆಲ್ಲವೂ ಉನ್ನತ ಜ್ಞಾನ ವಿಷಯವೂ ಕೂಡಾ ಅಲ್ಲ, ಕೇವಲ ಪ್ರಾಥಮಿಕ ಜ್ಞಾನ ವಿಷಯ. ಒಬ್ಬಾತನು ಪಾಪಿಗಳನ್ನು ರಕ್ಷಿಸುತ್ತಾನೆ, ಇನ್ನೊಬ್ಬಾತನು ಸಾಧುಗಳನ್ನು ಸಂರಕ್ಷಿಸುತ್ತಾನೆ. ಒಬ್ಬರು ದುರ್ಮಾರ್ಗರನ್ನು ರಕ್ಷಿಸಿ ಕೆಟ್ಟ ಕೆಲಸವನ್ನು ಮಾಡುತ್ತಿದ್ದಾನೆ. ಮತ್ತೊಬ್ಬರು ಸನ್ಮಾರ್ಗರನ್ನು ರಕ್ಷಿಸಿ ಒಳ್ಳೆಯ ಕೆಲಸವನ್ನು ಮಾಡುತ್ತಿದ್ದಾನೆ ಅಲ್ಲವೇ! ಎಂದು ಹೇಳುತ್ತಿದ್ದಾರೆ. ಮೇಲ್ನೋಟಕ್ಕೆ ಹಾಗೆಯೇ ಕಾಣಿಸಿದರೂ ಸ್ವಲ್ಪ ಬುದ್ಧಿ ಇಟ್ಟು ಆಲೋಚಿಸಿದರೆ ಇದರಲ್ಲಿನ ಸತ್ಯ ಅರ್ಥವಾಗಿ ಹೋಗುತ್ತದೆ. ಭಗವದ್ಗೀತೆ ಜ್ಞಾನಯೋಗದಲ್ಲಿ 36, 37 ಶ್ಲೋಕಗಳನ್ನು ನೋಡಿದರೂ **"ಪಾಪಾತ್ಮರಲ್ಲಿ ನೀನು ಎಷ್ಟು ದೊಡ್ಡ ಪಾಪಾತ್ಮನಾದರೂ ನಿನ್ನನ್ನು ನನ್ನ ಜ್ಞಾನದಿಂದ ಪವಿತ್ರನನ್ನಾಗಿ ಮಾಡುತ್ತೇನೆ."** ಎಂದು ಸ್ವತಃವಾಗಿ ಕೃಷ್ಣನು ಹೇಳಿದ್ದಾನೆ. 'ಅಪಿ ಚೇದಸಿ ಪಾಪಭ್ಯಸ್ಸರ್ವಭ್ಯಃ' ಎನ್ನುವ ಶ್ಲೋಕದಲ್ಲಿ ಈ ವಿಷಯವಿದೆ. ಪಕ್ಕದಲ್ಲಿಯೇ 37ನೇ ಶ್ಲೋಕದಲ್ಲಿ **"ಅಗ್ನಿಯಲ್ಲಿ ಕಟ್ಟಿಗೆಗಳು ಸುಟ್ಟುಹೋದಂತೆ ಜ್ಞಾನವೆನ್ನುವ ಅಗ್ನಿಯಲ್ಲಿ ಪಾಪಗಳೆನ್ನುವವು ಪೂರ್ತಿಯಾಗಿ ಸುಟ್ಟುಹೋಗುತ್ತವೆ"** ಎಂದು ಹೇಳಿದ್ದಾನೆ. ಇಲ್ಲಿ ಯೇಸು ಹೇಳಿರುವುದೇ ಕೃಷ್ಣನು ಕೂಡಾ ಹೇಳಿದ್ದಾನೆ.

ಪಾಪಿಗಳನ್ನು ರಕ್ಷಿಸಿದರೇ ಸಾಧುಜನರಾಗುತ್ತಾರೆ. ಆಗ ಅಧರ್ಮಗಳನ್ನು ಅಡಗಿಸಿ ಎಲ್ಲರನ್ನು ಧರ್ಮವರರನ್ನಾಗಿ ಬದಲಿಸಿದಂತಾಗುತ್ತದೆ. ಪಾಪಿಗಳಲ್ಲಿನ ಪಾಪವನ್ನು ಕ್ಷಮಿಸಿದರೇ, ಇಲ್ಲದಂತೆ ಮಾಡಿದರೇ ಅವರು ಸಾಧುಜನರೇ ಆಗುತ್ತಾರೆ. ಹಾಗೆ ಸಾಧುಜನರನ್ನು ಹೆಚ್ಚಿಸಬೇಕೆಂದರೇ, ಸಾಧುಜನರನ್ನು ಅಭಿವೃದ್ಧಿಮಾಡಬೇಕೆಂದರೇ ಪಾಪಜನರನ್ನು ಇಲ್ಲದಂತೆ ಮಾಡಬೇಕು. ಇಲ್ಲದಂತೆ ಮಾಡಬೇಕೆಂದರೇ ಅವರ ಕರ್ಮಗಳನ್ನು (ಪಾಪಗಳನ್ನು) ಇಲ್ಲದಂತೆ ಸುಟ್ಟುಹಾಕಬೇಕು. ಅದೇ ಕ್ಷಮಾಶೀಲತೆ. ಪಾಪಿಗಳನ್ನು ಮನುಷ್ಯರಲ್ಲಿರುವ ಪಾಪಗಳನ್ನು ಇಲ್ಲದಂತೆ ಮಾಡುತ್ತೇನೆಂದು ಮೂರು ದೈವಗ್ರಂಥಗಳಲ್ಲಿ ಇದೇ ವಿಷಯವನ್ನೇ ಹೇಳುತ್ತಾ ಭಗವದ್ಗೀತೆಯಲ್ಲಿ **'ಕರ್ಮ ದಹನ'** ಎಂದು ಹೇಳಿದ್ದಾರೆ. ಬೈಬಲ್‌ನಲ್ಲಿ **'ಪಾಪ ಕ್ಷಾಮಪಾಣೆ'** ಎಂದಿದ್ದಾರೆ. ಖುರ್‌ಆನ್‌ನಲ್ಲಿ **'ಪಾಪ**

**ಕ್ಷಮಾಶೀಲತೆ'** ಎಂದು ಹೇಳಿದ್ದಾರೆ. ಮೂರು ಒಂದೇ ಜ್ಞಾನವನ್ನೇ ತಿಳಿಸುತ್ತಿವೆ ಅಲ್ಲವೇ! ಪಾಪಿಗಳನ್ನು ಕ್ಷಮಿಸುತ್ತೇನೆಂದರೇ ಅವರ ಕರ್ಮವನ್ನು ಇಲ್ಲದಂತೆ ಮಾಡಿ ಒಳ್ಳೆಯವರನ್ನಾಗಿ ಬದಲಾಯಿಸುವುದೇ ಅಲ್ಲವೇ! ಹಾಗೆ ಒಳ್ಳೆಯವರನ್ನು ಹೆಚ್ಚಿಸುತ್ತೇನೆಂದರೇ ಪಾಪಾತ್ಮರ ಪಾಪಗಳನ್ನು ಇಲ್ಲದಂತೆ ಮಾಡುತ್ತೇನೆಂದಲ್ಲವೇ ಅರ್ಥ. ಎರಡು ಮಾತುಗಳು ಒಂದೇ ಅಲ್ಲವೇ!

'ವಿನಾಶಾಯಚ ದುಷ್ಕೃತಾಮ್' ಎನ್ನುವ ಮಾತಿನಲ್ಲಿ ಪಾಪಿಗಳನ್ನು ಸಾಯಿಸುತ್ತೇನೆಂದು ಹೇಳಿಕೊಳ್ಳಬಾರದು. ಪಾಪಿಗಳನ್ನು ಇಲ್ಲದಂತೆ ಮಾಡುತ್ತೇನೆಂದು ಅರ್ಥವಿದೆ. ಪಾಪಿಗಳನ್ನು ಇಲ್ಲದಂತೆ ಮಾಡಿದರೆ **'ಪರಿತ್ರಾಣಾಯ ಸಾಧೂನಾಂ'** ಆಗುತ್ತದೆ. ಒಳ್ಳೆಯವರ ಸಂಖ್ಯೆಯನ್ನು ಹೆಚ್ಚಿಸಿದಂತಾಗುತ್ತದೆ. ಕೆಟ್ಟವರ ಸಂಖ್ಯೆಯನ್ನು ಇಲ್ಲದಂತೆ ಮಾಡಿ ಒಳ್ಳೆಯವರ ಸಂಖ್ಯೆಯನ್ನು ಬೆಳೆಸುತ್ತೇನೆಂದು ಶ್ಲೋಕದಲ್ಲಿ ಅರ್ಥವಿದೆ. "ಎಷ್ಟು ದುರ್ಮಾರ್ಗನಾದರೂ ಅವನ ಪಾಪವನ್ನು ಇಲ್ಲದಂತೆ ಮಾಡುತ್ತೇನೆ". ಎಂದು ಜ್ಞಾನಯೋಗದಲ್ಲಿ 36ನೇ ಶ್ಲೋಕದಲ್ಲಿ ಹೇಳಿದಾಗ ಇದ್ದ ಅರ್ಥವೇ 'ನಿಮ್ಮ ಪಾಪವನ್ನು ಕ್ಷಮಿಸುತ್ತೇನೆ' ಎಂದು ಹೇಳಿದಂತೆ ಅಲ್ಲವೇ! ಪಾಪವನ್ನು ಕ್ಷಮಿಸಿದಷ್ಟು ಮಾತ್ರಕ್ಕೆ ಪಾಪಿಗಳನ್ನು ಇಲ್ಲದಂತೆ ಮಾಡಿದಂತಾಗುತ್ತದೆ ಆದರೇ ಬೇರೆ ಹೇಳಿಕೊಳ್ಳುವುದಕ್ಕೆ ಅವಕಾಶವಿಲ್ಲ. ದೇವರು ಯಾವ ಮತದಲ್ಲಾದರೂ ತನ್ನನ್ನು ಆಶ್ರಯಿಸಿದವರಿಗೆ ಪಾಪಕ್ಷಮಾಪಣೆ ಮಾಡುತ್ತಾನೆಂದು ಎಲ್ಲಾ ಗ್ರಂಥಗಳಲ್ಲಿ ಹೇಳಿದ್ದಾರೆ. ಆದರೇ ಕೆಲವರು ಅದನ್ನು ಅರ್ಥ ಮಾಡಿಕೊಳ್ಳದೆ ಪಾಪ ಕ್ಷಾಮಾಪಣೆಯನ್ನು ಪಾಪ ರಕ್ಷಣೆಯೆಂದು ಅಂದುಕೊಂಡಿದ್ದಾರೆ. ಪಾಪಾತ್ಮರನ್ನು ನಾನು ಪವಿತ್ರರನ್ನಾಗಿ ನಾನು ಮಾಡುತ್ತೇನೆ ಎಂದು ಭಗವದ್ಗೀತೆಯಲ್ಲಿ ಇದೆ. ಹಾಗೆ ಹೇಳುವುದರಲ್ಲಿ ಪಾಪಗಳನ್ನು ಇಲ್ಲದಂತೆ ಮಾಡಿ ಅವರನ್ನು ಪವಿತ್ರರನ್ನಾಗಿ ಮಾಡುತ್ತೇನೆಂದು ಅರ್ಥ. ಅದೇ ವಿಧಾನ ಮೂರು ದೈವಗ್ರಂಥಗಳಲ್ಲಿ ಇದೆ. ಒಂದರಲ್ಲಿ ಏನು ಇದೆಯೋ ಉಳಿದ ಎರಡು ಗ್ರಂಥಗಳಲ್ಲಿ ಕೂಡಾ ಅದೇ ಇರುತ್ತದೆ. ಚಿಕ್ಕ ಉದಾಹರಣೆಯನ್ನು ಹೇಳಿದರೆ ಹೀಗೆ ಇದೆ. ಹಾವು ಮುಂದಕ್ಕೆ ಹೋಗುತ್ತದೆ ಎಂದು ಹೇಳಿದರೂ, ಹಾವು

ಹಿಂದಕ್ಕೆ ಹೋಗುವುದಿಲ್ಲ ಎಂದು ಹೇಳಿದರೂ ಎರಡೂ ಒಂದೇ ಅರ್ಥ. ಆದರೇ ಹೇಳುವುದು ಬೇರೆ ವಿಧವಾಗಿದೆ. ಹಾಗೇ ಪಾಪಿಗಳನ್ನು ಇಲ್ಲದಂತೆ ಮಾಡಿದರೆ ಪವಿತ್ರರಾಗುತ್ತಾರೆ. ಪವಿತ್ರರನ್ನು ಹೆಚ್ಚಿಸಬೇಕೆಂದರೇ ಪಾಪಾತ್ಮರನ್ನು ಇಲ್ಲದಂತೆ ಮಾಡಬೇಕು. ಎರಡೂ ಒಂದೇ ಆಗುತ್ತದೆ. ಅದೇ ವಿಧವಾಗಿ ಬೈಬಲ್‌ನಲ್ಲಿ ಪಾಪಾತ್ಮರನ್ನು ಕ್ಷಮಿಸುತ್ತೇನೆ ಎಂದಿದ್ದಾನೆ. ಅದೇ ಮಾತನ್ನೇ ಗೀತಾ ಜ್ಞಾನಯೋಗ 36ರಲ್ಲಿ ಎಷ್ಟು ಪಾಪಾತ್ಮನಾದರೂ ನಿಮ್ಮ ಪಾಪವನ್ನು ಇಲ್ಲದಂತೆ ಮಾಡುತ್ತೇನೆ ಎಂದಿದ್ದಾನೆ. **ಮೂರು ಮತಗಳಿಗು ದೇವರು ಒಬ್ಬನೇ, ದೇವರ ಜ್ಞಾನ ಒಂದೇ.** ಗ್ರಂಥದಲ್ಲಿ ಹೇಳಿರುವುದನ್ನು ಅರ್ಥಮಾಡಿಕೊಳ್ಳದೆ ನಿನ್ನ ಇಷ್ಟಬಂದಂತೆ ಅಂದುಕೊಂಡರೆ ಅದನ್ನು ದೇವರು ಒಪ್ಪಿಕೊಳ್ಳುವುದಿಲ್ಲ. ಹಾಗೆ ವಕ್ರೀಕರಿಸಿ ಹೇಳಿದವರಿಗೆ ಶೇಷವಿರುವ ದೊಡ್ಡ ಪಾಪ ಸೇರುತ್ತದೆ.

ಇಂದಿನ ಕ್ರೈಸ್ಥರು ತಮ್ಮ ಮತ ಪ್ರಚಾರದ ಮೇಲೆ ದೃಷ್ಠಿ ಇಟ್ಟು ಉಳಿದ ಮತಗಳಿಗಿಂತ ತಮ್ಮ ಮತವೇ ಶ್ರೇಷ್ಠವಾದುದೆಂದು ಪ್ರಚಾರ ಮಾಡುತ್ತಿದ್ದಾರೆ. ಮತ ವಿಷಯದಲ್ಲಿ ಕ್ರೈಸ್ಥರು ತಪ್ಪಾಗಿ ಪ್ರವರ್ತಿಸುವುದು, ತಮ್ಮ ಮತದೊಳಗೆ ಹಿಂದೂಗಳನ್ನು ಆಕರ್ಷಿಸಿಕೊಳ್ಳುವುದಕ್ಕೆ ಯೇಸು ಹೇಳದಿರುವವು, ಬೈಬಲ್‌ನಲ್ಲಿ ಇಲ್ಲದ ವಿಷಯಗಳು ಪ್ರಚಾರ ಮಾಡುತ್ತಿದ್ದಾರೆ. ಯೇಸು ಹೇಳಿದ ಮಾತುಗಳು ಬೈಬಲ್ ಗ್ರಂಥದಲ್ಲಿ ಪ್ರತ್ಯಕ್ಷವಾಗಿವೆ. ಅಲ್ಲಿ ಪಾಪಗಳ ವಿಷಯದಲ್ಲಿ ಏನು ಹೇಳಿದ್ದಾನೆಂದು ನೋಡಿದರೆ ಈ ದಿನ ಕ್ರೈಸ್ಥರ ಪ್ರಚಾರ ಪೂರ್ತಿ ತಪ್ಪಾಗುತ್ತದೆ. ಬೈಬಲ್‌ನಲ್ಲಿನ ವಿಷಯಗಳು ಕ್ರೈಸ್ಥರಿಗೆ ಸ್ವಲ್ಪವೂ ಕೂಡಾ ಅರ್ಥವಾಗಲಿಲ್ಲವೆಂದು ತಿಳಿಯುತ್ತಿದೆ. ಇಲ್ಲಿಯವರೆಗು ಭಗವದ್ಗೀತೆಯಲ್ಲಿ ಹೇಳಿದ ವಿಷಯಗಳು ಹೇಳಿದ್ದೇವೆ. ಈಗ ಬೈಬಲ್‌ನಲ್ಲಿನ ಪಾಪ ವಿಷಯಗಳನ್ನು ಕುರಿತು ಹೇಳಿದರೆ, ಒಂದು ದಿನ ಭೋಜನದಲ್ಲಿ ಯೇಸು ದ್ರಾಕ್ಷಿ ರಸವನ್ನು ಕೊಟ್ಟು "ಇದು ನನ್ನ ರಕ್ತ" ಎಂದಿದ್ದಾನೆ. ಹಾಗೇ ರೊಟ್ಟಿಯ ತುಂಡನ್ನು ಕೊಟ್ಟು "ಇದು ನನ್ನ ಶರೀರ" ಎಂದಿದ್ದಾನೆ. **"ನನ್ನ ನಿಬಂಧನ ರಕ್ತದಿಂದ ನಿನ್ನ ಪಾಪಗಳು ಹೋಗುತ್ತವೆ"** ಎಂದು ಹೇಳಿದ್ದಾನೆ. ಅದಕ್ಕು ಮುನ್ನ ದ್ರಾಕ್ಷಿರಸವನ್ನು

ಕೊಟ್ಟು "ಇದು ನನ್ನ ರಕ್ತ, ಇದನ್ನು ಕುಡಿಯಿರಿ" ಎಂದು ಹೇಳಿದ್ದಾನೆ. ನಂತರ "ತನ್ನ ನಿಬಂಧನ ರಕ್ತದಿಂದ ಪಾಪ ಕ್ಷಮಾಪಣೆ ಇದೆ" ಎಂದು ಹೇಳಿದ್ದಾನೆ. ರಕ್ತವನ್ನು ಕುಡಿಯಿರಿ ಎಂದಿದ್ದಾನೆ ಹೊರತು ಅದನ್ನು ಬಳಿದುಕೊಂಡರೇನೋ, ರಕ್ತದಿಂದ ತೊಳೆದುಕೊಂಡರೇನೋ ಪಾಪವು ಹೋಗುತ್ತದೆಂದು ಹೇಳಲಿಲ್ಲ.

ಈ ದಿನ ಕ್ರೈಸ್ಥರು ನಮ್ಮ ಯೇಸು ರಕ್ತದಿಂದ ನಿನ್ನ ಪಾಪವು ತೊಳೆದುಹಾಕಲ್ಪಡುತ್ತಿದೆ. ನಮ್ಮ ದೇವರು ಪಾಪವನ್ನು ಕ್ಷಮಿಸುತ್ತಾನೆ. ನಿಮ್ಮ ದೇವರು ಪಾಪಿಗಳನ್ನು ಯಮಲೋಕಕ್ಕೆ ಕಳುಹಿಸಿ ಶಿಕ್ಷೆಗಳು ಅನುಭವಿಸುವಂತೆ ಮಾಡುತ್ತಾನೆ. ಈ ದಿನ ಪಾಪ ಮಾಡದವನು ಯಾರೂ ಇಲ್ಲ. ಆದ್ದರಿಂದ ನೀವೆಲ್ಲರೂ ಯೇಸು ಹತ್ತಿರಕ್ಕೆ ಬಂದು, ಯೇಸುನನ್ನು ವಿಶ್ವಾಸಿಸಿದರೆ ನಿಮ್ಮ ಪಾಪ ಕ್ಷಮಾಪಣೆ ನಡೆದುಹೋಗುತ್ತದೆ. ನಿಮ್ಮ ಮತದಲ್ಲಿ ಪಾಪಿಗಳು ಶಿಕ್ಷಿಸಲ್ಪಡುತ್ತಾರೆ. ನಮ್ಮ ಮತದಲ್ಲಿ ಪಾಪಿಗಳು ಕ್ಷಮಿಸಲ್ಪಡುತ್ತಾರೆ. ನಿಮ್ಮ ಪಾಪಗಳು ಯೇಸು ರಕ್ತದಿಂದ ತೊಳೆದುಹಾಕಲ್ಪಡುತ್ತವೆ. ರಕ್ತಪ್ರೋಕ್ಷಣೆಯಿಂದಲೇ ನಿಮ್ಮ ಪಾಪ ಹೋಗುತ್ತದೆಂದು ಹೇಳುತ್ತಿದ್ದಾರೆ. ಹಾಗೆ ಹೇಳುವುದು ಪೂರ್ತಿ ತಪ್ಪು. ಯೇಸು ತನ್ನ ರಕ್ತವನ್ನು ಕುಡಿಯಿರಿ ಎಂದಿದ್ದಾನೆ ಹೊರತು ಬೇರೆ ಏನು ಹೇಳಲಿಲ್ಲ. ರಕ್ತವನ್ನು ನಿಬಂಧನ ರಕ್ತ ಎಂದಿದ್ದಾನೆ ಹೊರತು, ಸಾಧಾರಣ ರಕ್ತವೆಂದು ಹೇಳಲಿಲ್ಲ. ಆದರೇ ಅಲ್ಲಿ ಕೊಟ್ಟಿರುವುದು ದ್ರಾಕ್ಷರಸ ದ್ರಾಕ್ಷರಸವನ್ನು ರಕ್ತವಾಗಿ ಹೇಗೆ ಹೋಲಿಸಿಕೊಳ್ಳಬೇಕು? ಅದನ್ನು ಕುಡಿದರೆ ಏನಾಗುತ್ತದೋ ಆತನೇ ಹೇಳಿದ್ದಾನೆ. ಪಾಪಗಳು ಹೋಗುತ್ತವೆಯೆಂದು ಹೇಳಿದ್ದಾನೆ. ಪಾಪಗಳು ಇಲ್ಲದಂತೆ ಹೋಗುವುದಕ್ಕೆ ದ್ರಾಕ್ಷರಸದಲ್ಲಿ ಯಾವಶಕ್ತಿ ಇದೆ? ಕೊಟ್ಟಿರುವುದು ಅಂದಿನ ಶಿಷ್ಯರಿಗೇ ಹೊರತು ಅದು ಈ ದಿನ ಇತರರಿಗೆ ಹೇಗೆ ಅನ್ವಯಿಸುತ್ತದೆ? ಈ ದಿನ ದ್ರಾಕ್ಷರಸವಾಗಲಿ, ರಕ್ತವಾಗಲಿ ಏನೂ ಇಲ್ಲ. ಆತನೇ ಇಲ್ಲ, ಈಗ ಆತನ ರಕ್ತ ಹೇಗೆ ದೊರೆಯುತ್ತದೆ? ಆತನೇ ಇಲ್ಲದಿರುವಾಗ ಆತನ ರಕ್ತವನ್ನು ಕುರಿತು ಕ್ರೈಸ್ಥರು ಹೇಳುವುದು ಮೋಸ ಮಾಡಿದಂತೆ ಅಲ್ಲವೇ! ಪ್ರಜೆಗಳನ್ನು ತಪ್ಪುದಾರಿಯಲ್ಲಿ ಕಳಿಸಿದಂತೆ ಅಲ್ಲವೇ?

ಕ್ರೈಸ್ಥರು ಈ ದಿನ ಮತ ಪ್ರಚಾರವನ್ನು ಮಾಡುತ್ತಿದ್ದಾರೆ ಹೊರತು, ಜ್ಞಾನ ಪ್ರಚಾರ ಮಾಡಲಿಲ್ಲ. ಹಿಂದೂಗಳು ಅವರನ್ನು ನೋಡಿ ಅವರನ್ನು ಪ್ರಶ್ನಿಸುವ ವಿಧವಾಗಿ ಪ್ರಶ್ನಿಸದೆ ಹಿಂದೂಗಳು ಕೂಡಾ ತಪ್ಪಾಗಿ ಪ್ರಶ್ನಿಸುತ್ತಿದ್ದಾರೆ. ಇವರ ಪ್ರಶ್ನೆಗಳು ಇವರ ತಪ್ಪನ್ನು ತೋರಿಸುತ್ತಿವೆ ಹೊರತು, ಅವರ ತಪ್ಪನ್ನು ತೋರಿಸುತ್ತಿಲ್ಲ. ಈಗ ನಾವು ಕೇಳಿದಂತೆ ಅವರ ತಪ್ಪನ್ನು ತೋರಿಸಿ ಕೇಳಬಹುದು ಅಲ್ಲವೇ! ಎರಡುಕಡೆ ತಪ್ಪುಗಳೇ ಇವೆ. ಹಿಂದೂಗಳಿಗೆ ತಮ್ಮ ಪ್ರಾಮಾಣಿಕ ಗ್ರಂಥವಾದ ಭಗವದ್ಗೀತೆ ಇಲ್ಲಿಯವರೆಗು ಅರ್ಥವಾಗಲಿಲ್ಲ. ಹಾಗೇ ಕ್ರೈಸ್ಥರಿಗೆ ಬೈಬಲ್ ಗ್ರಂಥ ಅರ್ಥವಾಗಲಿಲ್ಲ. ಅವರು ಅವರ ಪ್ರಚಾರದಲ್ಲಿ "ರಕ್ತ ಪ್ರೋಕ್ಷಣೆ ಪಾಪ ಪರಿಹಾರಮ್" ಎನ್ನುವ ವಾಕ್ಯವನ್ನು ಹೇಳುತ್ತಿರುತ್ತಾರೆ. ಆ ವಾಕ್ಯ ವೇದಗಳಲ್ಲಿ ಇದೆಯೆಂದು ರಕ್ತದಿಂದ ತೊಳೆಯುವುದರಿಂದ ಪಾಪ ಕ್ಷಾಮಾಪಣೆ ಇದೆಯೆಂದು ಹೇಳುತ್ತಿರುತ್ತಾರೆ. ಆದರೇ ಅವರಿಗಾಗಲಿ, ಅವರ ಹಿರಿಯರಿಗಾಗಲಿ ರಕ್ತ ಎಂದರೆ ಏನೋ ತಿಳಿದಿಲ್ಲ. ಯೇಸು ರಕ್ತ ಆತನನ್ನು ಮೊಳೆಗಳು ಹೊಡೆದ ದಿನವೇ ಸೋರಿಹೋಗಿದೆ. ಹಾಗೆ ಸೋರಿದಾಗಾದರೂ ಯಾರಾದರೂ ಆತನ ರಕ್ತವನ್ನು ತೆಗೆದುಕೊಂಡು ತಮ್ಮ ಪಾಪಗಳನ್ನು ತೊಳೆದುಕೊಂಡಿದ್ದಾರಾ? ಏನು ಇಲ್ಲದ್ದು ಅವರು ತಮ್ಮ ಮತ ಪ್ರಚಾರ ನಿಮಿತ್ತವಾಗಿ ರಕ್ತ ಪಾಪಕ್ಷಮಾಪಣೆ ಎಂದು ಅಸತ್ಯವನ್ನು ಹೇಳುತ್ತಿದ್ದಾರೆ. ಯಾರಾದರೂ, ಯಾವ ಮತಸ್ತನಾದರೂ ತಮ್ಮ ಗ್ರಂಥದಲ್ಲಿನ ವಿಷಯಗಳನ್ನು ತಪ್ಪಾಗಿ ಹೇಳಿದರೆ, ಆಗ ಅವರ ತಪ್ಪುಗಳನ್ನು ತೋರಿಸಿ ಅವರನ್ನು ವಿಮರ್ಶಿಸಬಹುದಾಗಲಿ, ಹಾಗಲ್ಲದೆ ನಾವು ತಪ್ಪಾಗಿ ಮಾತನಾಡುತ್ತಾ ಅವರನ್ನು ಪ್ರಶ್ನಿಸುವುದು ಒಳ್ಳೆಯದಲ್ಲ ಅವರಲ್ಲಿನ ತಪ್ಪುಗಳು ತಿಳಿಯುವುದಕ್ಕೆ ಮೊದಲು ಹಿಂದೂಗಳು ಅವರ ಗ್ರಂಥವನ್ನು ಓದಿ ನಾವು ಅರ್ಥಮಾಡಿಕೊಂಡಿದ್ದರೆ ಅವರನ್ನು ಯಾವಾಗಾದರೂ ತಪ್ಪು ಹಿಡಿಯಬಹುದು. ಬೈಬಲ್‌ನಲ್ಲಿ ಇರುವುದು ಕೂಡಾ ಭಗವದ್ಗೀತೆಯಲ್ಲಿನದ್ದೇ ನಾನು ಮೂರು ಗ್ರಂಥಗಳನ್ನು ಓದಿದ್ದೇನೆ, ನನಗೆ ಚೆನ್ನಾಗಿ ಅರ್ಥವಾಗಿವೆ. ಆದ್ದರಿಂದ ನಾನು ಈ ದಿನ ಯಾರ ಗ್ರಂಥದಲ್ಲಿನ ಸಮಾಚಾರವನ್ನಾದರೂ ಹೇಳಬಲ್ಲೆನು. ಉಳಿದ ಎರಡು ಮತಗಳ ತಪ್ಪುಗಳನ್ನು ತೋರಿಸಬಲ್ಲೆನು.

**ಅವರ ಪ್ರಶ್ನೆ :– ಕ್ರೈಸ್ಥವ ದೇವರೆ ನಿಜವಾದ ದೇವರೆಂದು, ಹಿಂದೂ ದೇವರುಗಳ್ಯಾರು ದೇವರುಗಳೆ ಅಲ್ಲವೆಂದು ಅಂದರೇ ಇಲ್ಲಿಯವರೆಗು ಮೊದಲು ದೇವರು ಇಲ್ಲವಾ? ಅದಕ್ಕು ಮುನ್ನ ಮತಗಳು ಇಲ್ಲವಾ? ಭಗವಂತನನ್ನು ಸೇರಿಕೊಂಡ ಮಹಾತ್ಮರು ಇಲ್ಲವಾ?**

**ನಮ್ಮ ಉತ್ತರ :–** ಈ ಪ್ರಶ್ನೆಯಲ್ಲಿ ಮೂರು ತಪ್ಪುಗಳು ಕಾಣಿಸುತ್ತಿವೆ. ಉತ್ತರ ಹೇಳಬೇಕಾದವನದ್ದು ಹೇಗೊ ತಪ್ಪೇ ಇರುತ್ತದೆ. ಆದರೇ ಮೊದಲು ನಮ್ಮ ಕಡೆಯಿಂದ ಭಗವದ್ಗೀತೆ ಪ್ರಕಾರ, ಶಾಸ್ತ್ರಬದ್ಧತೆಯ ಜ್ಞಾನವನ್ನು ಅನುಸರಿಸಿ ತಪ್ಪುಗಳು ಇರಬಾರದು. ನಮ್ಮ ತಪ್ಪುಗಳು ಏನಿವೆಯೆಂದು ಅಂದುಕೊಳ್ಳಬಹುದು. ಅವರ ದೇವರನ್ನು ಒಬ್ಬನನ್ನೇ ಹೇಳಿ, ಹಿಂದೂ ದೇವರುಗಳನ್ನು ಅನೇಕರಿರುವಂತೆ ಕೇಳುವುದು ಮೊದಲ ತಪ್ಪು. ಅದಕ್ಕು ಮುನ್ನ ಮತಗಳಿಲ್ಲವಾ? ಎನ್ನುವುದು ಎರಡನೆ ತಪ್ಪು. ಭಗವಂತನನ್ನು ಸೇರಿಕೊಂಡ ಮಹಾತ್ಮರು ಇಲ್ಲವಾ? ಎಂದು ಕೇಳುವುದು ಮೂರನೆ ತಪ್ಪಾಗುತ್ತದೆ. ಅದಕ್ಕು ಮುನ್ನ ಮತಗಳು ಇಲ್ಲವಾ ಎಂದು ಅಂದಿದ್ದಾರಲ್ಲಾ! ಅದಕ್ಕು ಮುನ್ನ ಮತಗಳು ಯಾವುದು ಇಲ್ಲ. ಕ್ರೈಸ್ಥವವು ಬಂದ ನಂತರ ಮೊದಲು ಸಂಘಗಳು ಏರ್ಪಟ್ಟು, ನಂತರ ಸಂಘಗಳು ಮತಗಳಾಗಿ ಏರ್ಪಟ್ಟಿವೆ. ಕ್ರೈಸ್ಥವವು ಮೊದಲ ಮತವಾಗಿ ಬದಲಾದ ನಂತರ ಹಿಂದೂ ಸಮಾಜವು ಕೂಡಾ ತಮ್ಮದು ಹಿಂದೂಮತವೆಂದು ಹೇಳಿಕೊಂಡಿದೆ. ಮತಗಳ ಚರಿತ್ರೆಯೊಳಗೆ ಹೋದರೆ ಹಿಂದೂತ್ವವು ಮೊದಲಿನಿಂದಿದ್ದರೂ ಅದಕ್ಕೆ ಮತ ಎನ್ನುವ ಹೆಸರಿಲ್ಲ. ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಏರ್ಪಟ್ಟ ಕ್ರೈಸ್ಥವವು ಮೊದಲ ಮತವಾಗಿ ತಯಾರಾಗಿ, ಕೆಲವು ಲಕ್ಷಗಳ ವರ್ಷಗಳಿಂದಿರುವ ಹಿಂದೂ ಸಮಾಜವು ತಮ್ಮನ್ನು ಕೂಡಾ ಮತವಾಗಿ ಹೇಳಿಕೊಳ್ಳುವುದು ಶುರುವಾಗಿದೆ. ಹಾಗೆ ಇಂದೂತ್ವವು ಎರಡನೆ ಮತವಾಗಿ ತಯಾರಾಗಿದೆ. ಅದಕ್ಕು ಮುನ್ನ ಮತ ಪ್ರಸ್ತಾಪವೇ ಇಲ್ಲ. ಎರಡುಸಾವಿರ ವರ್ಷಗಳಿಂದ ಕ್ರೈಸ್ಥವದೊಂದಿಗೆ ಹಿಂದೂತ್ವವು ಮತವಾಗಿದೆ. ಆಗ **'ಹಿಂದೂ'** ಎನ್ನುವ ಹೆಸರಿನಿಂದ ಇಲ್ಲದೇ **'ಇಂದೂ'** ಎನ್ನುವ ಹೆಸರಿನಿಂದ ಇರುತ್ತಿತ್ತು. ಸುಮಾರು 150 ವರ್ಷಗಳ

ಕೆಳಗಿನ ವರೆಗು 'ಇಂದೂ ಮತ' ಎಂದು ಹೇಳಲ್ಪಟ್ಟಿದೆ. ಇಂದು 'ಹಿಂದೂಮತ' ಎನ್ನುವ ಹೆಸರಿನಿಂದ ಹೇಳಲ್ಪಡುತ್ತಿದೆ. ಈ ವಿಧವಾಗಿ ಚರಿತ್ರೆ ತಿಳಿದು ಮಾತನಾಡಿದರೆ ಆಗ ಮತಗಳಿಲ್ಲ. ತಿಳಿಯದೆ ಮಾತನಾಡಿದರೆ ಮೇಲಿನ ಪ್ರಶ್ನೆಯಂತೆ ಅದಕ್ಕುಮುನ್ನ ಮತಗಳಿಲ್ಲವಾ? ಎಂದು ಕೇಳಿದಂತೆ ಇರುತ್ತದೆ. ಹಾಗೆ ಕೇಳುವುದು ನಮಗೆ ಚರಿತ್ರೆ ತಿಳಿದಿಲ್ಲವೆಂದು ಹೇಳಿಕೊಂಡಂತಿದೆ. ಹಾಗೆ ನಮ್ಮಷ್ಟಕ್ಕೆ ನಾವು ತಿಳುವಳಿಕೆ ಇಲ್ಲದವರಂತೆ ಹೊರಬೀಳುವುದು ಒಳ್ಳೆಯದಾ?

ಕ್ರೈಸ್ತರು 'ತಮ್ಮ ದೇವರು ನಿಜವಾದ ದೇವರು' ಎಂದು ಹೇಳುವುದು ಸಹಜವೇ. ಅಷ್ಟು ಮಾತ್ರಕ್ಕೆ 'ಹಿಂದೂ ದೇವತೆಗಳು ಯಾರೂ ದೇವರು ಅಲ್ಲವೆಂದು' ಎನ್ನುತ್ತೀರಾ ಎಂದು ನಾವು ಕೇಳಿದಂತಿದೆ. ಅವರು ಒಬ್ಬ ದೇವರನ್ನು ಪ್ರಸ್ತಾಪಿಸಿದರೆ, ನಾವು ಅನೇಕಮಂದಿ ದೇವರುಗಳನ್ನು ಪ್ರಸ್ತಾಪಿಸುವುದು ನಮ್ಮ ತಿಳುವಳಿಕೆಯಿಲ್ಲದ ಕೆಲಸವಾಗುತ್ತದೆ. ಯಾರಿಗಾದರೂ ದೇವರು ಒಬ್ಬನೇ ಇರುತ್ತಾನೆ, ಹೆಚ್ಚುಜನ ದೇವತೆಗಳು ಇರುವುದಿಲ್ಲ. ಹಾಗೆ ಹೆಚ್ಚು ಜನರನ್ನು ಹೇಳಬಾರದು. ಅವರ ಮತಕ್ಕೆ ಒಂದು ಹೆಸರಿನ ದೇವರಿದ್ದರೆ, ನಮ್ಮ ಮತಕ್ಕೆ ಕೂಡಾ ಒಂದು ಹೆಸರಿರುವ ದೇವರು ಇರುತ್ತಾನೆ. ವಾಸ್ತವವಾಗಿ ಹೆಸರುಗಳು ಬೇರೆಯಾದರೂ ಇಬ್ಬರಿಗೂ ಒಂದೇ ದೇವರಿದ್ದಾನೆನ್ನುವ ಮಾತು ವಾಸ್ತವ. ಒಂದೇ ದೇವರನ್ನು ಮರೆತು ಬಹಳಜನ ದೇವತೆಗಳು ಎನ್ನುವುದು, ದೇವರ ಮಾರ್ಗದಲ್ಲಿ ಪೂರ್ತಿ ತಪ್ಪಾಗುತ್ತದೆ. ಹಾಗೆ ಹೆಚ್ಚು ದೇವರುಗಳನ್ನು ಹೇಳಿ ನಮ್ಮ ಅಜ್ಞಾನವನ್ನು ನಾವೇ ಹೊರ ಇಟ್ಟುಕೊಳ್ಳಬಾರದು. ವಾಕ್ಯದಲ್ಲಿ ಇದು ಎರಡನೆ ತಪ್ಪಾಗಿದೆ.

ಭಗವಂತನನ್ನು ಸೇರಿಕೊಂಡ ಮಹಾತ್ಮರು ಇಲ್ಲವಾ? ಎಂದು ಕೇಳುವುದು ಮೂರನೆ ತಪ್ಪಾಗಿದೆ. ಇದರಲ್ಲಿ ಏನು ತಪ್ಪು ಇಲ್ಲದಂತೆ ಕಾಣಿಸಿದರೂ ದೇವರ ಸ್ಥಾನದಲ್ಲಿ ಭಗವಂತನು ಎಂದು ಹೇಳುವುದು ಆಧ್ಯಾತ್ಮಿಕ ತಿಳಿದವರಿಗೆ ದೊಡ್ಡ ತಪ್ಪಾಗಿ ಕಾಣಿಸುತ್ತದೆ. ಹಾಗೆ ಕಾಣಿಸುವುದಕ್ಕೆ ಕಾರಣ ಏನೆಂದರೇ! ದೇವರು ಬೇರೆ, ಭಗವಂತನು ಬೇರೆಯಾಗಿರುವುದೇ ಕಾರಣ ಎಂದು

ಹೇಳಬಹುದು. ದೇವರನ್ನು ಸೇರಿಕೊಂಡವರು ಇಲ್ಲವಾ? ಎಂದು ಕೇಳಿದ್ದರೆ ಸರಿಹೋಗುತ್ತಿತ್ತು. ಹಾಗಲ್ಲದೆ ಭಗವಂತನನ್ನು ಸೇರಿಕೊಂಡವರು ಇಲ್ಲವಾ? ಎನ್ನುವುದು ಪೂರ್ತಿ ತಪ್ಪು ಆಗಿದೆ. ಆಧ್ಯಾತ್ಮಿಕದಲ್ಲಿ ದೇವರು ಬೇರೆ, ಭಗವಂತನು ಬೇರೆ. ದೇವರು ಕಾಣಿಸದವನು, ಯಾರಿಗೂ ತಿಳಿಯದವನು. ಭಗವಂತನು ಎಲ್ಲರಿಗೂ ಕಾಣಿಸುವವನು, ಎಲ್ಲರಿಗೂ ತಿಳಿಯುವವನು. ದೇವರು ಭೂಮಿಮೇಲೆ ಅವತರಿಸಬೇಕೆಂದುಕೊಂಡಾಗ ಶರೀರ ಧರಿಸಿ ಭಗವಂತನಾಗಿ ಹುಟ್ಟುತ್ತಾನೆ. ಶರೀರ ಧರಿಸಿ ಹುಟ್ಟಿದವನನ್ನು 'ಭಗವಂತನು' ಎಂದು ಕರೆಯುತ್ತಾರೆ. ಭಗವಂತನು ಎಲ್ಲರಿಗೂ ಕಾಣಿಸುತ್ತಿದ್ದರೂ, ಆತನೇ ಭಗವಂತನೆಂದು ಯಾರಿಗೂ ತಿಳಿದಿಲ್ಲ. ಹಾಗಿರುವಾಗ ಯಾರಾದರೂ ಭಗವಂತನನ್ನು ಹೇಗೆ ಸೇರುತ್ತಾರೆ? ಸಾಧಾರಣ ಮನುಷ್ಯನಂತೆ ಆತನತ್ತಿರಕ್ಕೆ ಯಾರಾದರೂ ಹೋಗಬಹುದಾಗಲಿ, ಆತನೇ ಭಗವಂತನೆಂದು ತಿಳಿದು ಆತನನ್ನು ಯಾರೂ ಆಶ್ರಯಿಸಲಾರರು. ಭಗವಂತನು ಭೂಮಿಮೇಲೆ ಇದ್ದರೂ, ಆತನನ್ನು ಯಾರೂ ಗುರುತಿಸಲಾರರು. ಆತನು ಸರ್ವಸಾಧಾರಣ ಮನುಷ್ಯನಾಗಿಯೇ ಇರುತ್ತಾನೆ. ಆತನೇ ಭಗವಂತನೆಂದು ಹೇಳುವುದಕ್ಕೆ ಆತನಿಗೆ ಯಾವ ಗುರುತುಗಳು ಇರುವುದಿಲ್ಲ. ಭಗವಂತನು ಎನ್ನುವುದಕ್ಕೆ ನಿರ್ವಚನ ಒಂದು ಇದೆ. ಅದೇನೆಂದರೇ! 'ಭಗದಿಂದ ಸಜೀವವಾಗಿ ಹುಟ್ಟಿದವನನ್ನು ಭಗವಂತನು' ಎಂದು ಕರೆಯಬಹುದು. ಭಗ ಎಂದರೇ ತಾಯಿಗರ್ಭ. ತಾಯಿಗರ್ಭದಿಂದ ಸಜೀವವಾಗಿ ಹುಟ್ಟಿದವನನ್ನು ಭಗವಂತನೆಂದು ಕರೆಯುತ್ತಾರೆ. ತಾಯಿ ಗರ್ಭದಿಂದ ನಾವು ಎಲ್ಲರೂ ಹುಟ್ಟಿದ್ದೇವೆ ಅಲ್ಲವೇ! ಎಂದು ಕೆಲವರು ಕೇಳಬಹುದು. ವಾಸ್ತವಕ್ಕೆ ಭೂಮಿಮೇಲೆ ತಾಯಿಗರ್ಭದಿಂದ ಸಜೀವವಾಗಿ ಯಾರೂ ಹುಟ್ಟಲಿಲ್ಲ. ಈ ವಿಷಯವನ್ನು ನಮ್ಮ ರಚನೆಯಲ್ಲಿ **"ಜನನ ಮರಣ ಸಿದ್ಧಾಂತ"** ಎನ್ನುವ ಗ್ರಂಥ ಓದಿದರೆ ತಿಳಿಯುತ್ತದೆ.

ಯಾರಾದರೂ ದೇವರನ್ನು ಸೇರಿ, ಆತನಲ್ಲಿ ಐಕ್ಯವಾಗಿ ಹೋಗಬಹುದು ಆದರೇ ಭಗವಂತನನ್ನು ಸೇರಿ ಆತನಲ್ಲಿ ಸೇರಿಹೋದವರು ಯಾರೂ ಇಲ್ಲ. ಕರ್ಮಗಳು ಇಲ್ಲದಂತೆ ಹೋದವನು ದೇವರಲ್ಲಿ ಸೇರಿಹೋಗಬಹುದೆನ್ನುವುದು

ಶಾಸ್ತ್ರಬದ್ದವಾದ ಮಾತಾಗುತ್ತದೆ. ಭಗವಂತನಲ್ಲಿ ಸೇರಿಹೋಗಿದ್ದಾನೆನ್ನುವುದು ಅಶಾಸ್ತ್ರೀಯವಾಗುತ್ತದೆ. ಶಾಸ್ತ್ರಗಳು ಭೂಮಿಮೇಲೆ ಆರು ಇವೆ. ಅದರಲ್ಲಿ ಕ್ರಮವಾಗಿ 1) ಗಣಿತ ಶಾಸ್ತ್ರ 2) ಖಗೋಳ ಶಾಸ್ತ್ರ 3) ರಸಾಯನ ಶಾಸ್ತ್ರ 4) ಭೌತಿಕ ಶಾಸ್ತ್ರ 5) ಜ್ಯೋತಿಷ್ಯ ಶಾಸ್ತ್ರ 6) ಬ್ರಹ್ಮವಿದ್ಯಾ ಶಾಸ್ತ್ರ. ಕೊನೆಯದು ಬ್ರಹ್ಮವಿದ್ಯಾ ಶಾಸ್ತ್ರ ಎಲ್ಲವುದಕ್ಕು ಆಧಾರವಾದ ಶಾಸ್ತ್ರ. ಆಧ್ಯಾತ್ಮಿಕದಲ್ಲಿ ತಪ್ಪು ಒಪ್ಪುಗಳನ್ನು ಇದರ ಮೂಲಕವೇ ತಿಳಿಯಬಹುದು. ಆದ್ದರಿಂದ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ದೇವರು ಬೇರೆ. ಭಗವಂತನು ಬೇರೆಯೆಂದು ಹೇಳಬಹುದು. ಹಾಗಲ್ಲದೆ ದೇವರು ಭಗವಂತನು ಒಬ್ಬನೆಯೆಂದು ಅಂದುಕೊಂಡರೆ ಅದು ಧರ್ಮ ವಿರುದ್ಧ, ಶಾಸ್ತ್ರವಿರುದ್ಧವಾಗುತ್ತದೆ. ಒಬ್ಬವ್ಯಕ್ತಿ ಆಧ್ಯಾತ್ಮಿಕ ವಿದ್ಯೆಯನ್ನು ಕಲಿತಿದ್ದರೆ ಆಗ ಹಿಂದೂ ಧರ್ಮರಕ್ಷಣೆ ಅವರಿಗೆ ಹಿಂದೂ ಧರ್ಮಗಳೇ ತಿಳಿಯವೆನ್ನುವ ಮಾತು ಹೊರಬೀಳುತ್ತದೆ. ಈ ದಿನ ಇರುವ ಸತ್ಯ ಕೂಡಾ ಅದೇಯೆಂದು ಹೇಳಬಹುದು.

ನಾವು 'ಹಿಂದೂ ಧರ್ಮ ಪರಿರಕ್ಷಣೆ' ಎಂದು ಹೆಸರು ಇಟ್ಟುಕೊಂಡವರನ್ನು ನೋಡಿದ್ದೇವೆ. ಅವರಲ್ಲಿ ಹಿಂದೂ ಧರ್ಮಗಳು ತಿಳಿದವರು ಒಬ್ಬರು ಕೂಡಾ ಕಾಣಿಸಲಿಲ್ಲ. ಕನಿಷ್ಟ ಭಗವದ್ಗೀತೆಯನ್ನು ಓದಿದವರು ಕೂಡಾ ಇಲ್ಲ. ಅವರ ಹಿಂದಿರುವ ಹಿರಿಯರು 'ಅವನು ಹಿಂದುವು ಅಲ್ಲ' ಎಂದರೇ, ಅವನು ಹಿಂದೂವು ಆದರೂ ಕೂಡಾ ಅವನಮೇಲೆ ದಾಳಿಮಾಡುವುದು ಮಾತ್ರವೇ ಸದಸ್ಯರಿಗೆ ತಿಳಿದಿದೆ. ಈ ದಿನ ಸ್ವಲ್ಪವಾದರೂ ಜ್ಞಾನವಾಗಲಿ, ವಿಚಕ್ಷಣೆಯಾಗಲಿ ಇಲ್ಲದವರು ತಮ್ಮ ಹಿರಿಯರ ಮೊಣಕೈ ನೀರು ಕುಡಿಯುತ್ತಾ ಅವರು ಏನು ಹೇಳಿದರೆ ಅದು ಮಾಡುತ್ತಿದ್ದಾರೆ. ಅದರಿಂದ ಒಂದು ಸಮಯದಲ್ಲಿ ಭಾರತದೇಶವನ್ನು ಇಂದೂ (ಜ್ಞಾನ) ದೇಶ ಎಂದು ಕರೆಸಿಕೊಂಡ ಶಕ್ತಿವಂತವಾದ ಇಂದೂಗಳಿರುವ ದೇಶದಲ್ಲಿ ಒಂದು ಚೂರು ಆತ್ಮಜ್ಞಾನ ತಿಳಿಯದವರು ಹಿಂದೂಗಳೆಂದು ಹೇಳಿಕೊಳ್ಳುವುದು ನಾಚಿಕೆಗೇಡು. ದೈವಜ್ಞಾನ ತಿಳಿದ ನಮಗೆ ಇಂದಿನ ಜ್ಞಾನ ತಿಳಿಯದ ಹಿಂದೂಗಳು ಇತರೆ ಮತಗಳ ಮುಂದೆ ತಲೆ

ತಗ್ಗಿಸುವಂತೆ ಮಾಡುತ್ತಿದ್ದಾರೆ. ಆದ್ದರಿಂದ ಹಿಂದೂಗಳಾದವರು ತಮ್ಮ ಜ್ಞಾನವನ್ನು ಸ್ವಲ್ಪವಾದರೂ ತಿಳಿಯಿರಿ. ಹಿಂದೂಗಳಿಗೆ ಉಳಿದ ಮತಗಳ ಮುಂದೆ ಗೌರವವನ್ನು ಇರಿಸಿರಿ. ಈ ದಿನ ಅಗ್ರಕುಲದವರ ಕೈಯಲ್ಲಿ ಸಿಕ್ಕಿಕೊಂಡ ಹಿಂದೂ ಸಂಸ್ಥೆಗಳಲ್ಲಿ ಕೆಲಸ ಮಾಡುವವರು ತಮ್ಮ ಹಿರಿಯರು ಹೇಳುವುದು ಒಳ್ಳೆಯದೊ, ಕೆಟ್ಟದೊ ಆಲೋಚಿಸಿ ಕೆಲಸ ಮಾಡಿರಿ. ಹಾಗಲ್ಲದೆ ಅವರ ಮಾತುಗಳಿಗೆ ಪ್ರೋತ್ಸಹಿಸಲ್ಪಟ್ಟು ಯಾರನ್ನು ಹೊಡೆಯಿರೆಂದರೇ ಅವರನ್ನು ಹೊಡೆಯುವುದು, ಯಾರನ್ನು ಬೈಯ್ಯಿರೆಂದರೇ ಅವರನ್ನು ಬೈಯ್ಯುವುದು ಮಾಡಬೇಡಿರೆಂದು ಹೇಳುತ್ತಿದ್ದೇವೆ. ಇದೆಲ್ಲ ನಮ್ಮ ಅನುಭವದಿಂದ ಹೇಳುತ್ತಿದ್ದೇವೆ. ನಾನು ಸ್ವಚ್ಛವಾದ ಹಿಂದೂ ವಾಗಿದ್ದು ಅದ್ವೈತ, ದ್ವೈತವನ್ನು ಸ್ಥಾಪಿಸಿದ ಸಿದ್ಧಾಂತಕರ್ತರೊಂದಿಗೆ ಸಮಾನವಾಗಿ ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿದ ನಮ್ಮನ್ನೇ ಹಿಂದೂಗಳು ಅಲ್ಲ ಎಂದವರು ಇದ್ದಾರೆ. ಇಂದೂ ಎಂದು ಬರೆದರೆ 'ಹಿಂದೂ ಎನ್ನುವುದು ನಮ್ಮ ಮತ, ಇಂದೂ ಎನ್ನುವುದು ನಿಮ್ಮ ಮತ' ಎಂದು ಹೇಳಿದವರು ಇದ್ದಾರೆ.

ಹೀಗೆ ಹಿಂದೂಮತವನ್ನು ಸೀಳಿಸುತ್ತಾ ಹೋದರೆ ಇವರು ಹಿಂದೂ ಮತವನ್ನು ರಕ್ಷಿಸಿದಂತಾ, ಭಾಗಗಳು ಮಾಡಿ ಚಿಕ್ಕದಾಗಿ ಮಾಡಿದಂತಾ? ಒಂದುಕಾಲದಲ್ಲಿ ಹಿಂದೂವಾದ ಬುದ್ಧನನ್ನು ಪಕ್ಕಕ್ಕೆ ಕಳಿಸಿ ಬುದ್ಧನದು ಪ್ರತ್ಯೇಕ ಮತವೆಂದು ಹೇಳಿ ಒಂದೇಸಲ ಹಿಂದೂಮತದಿಂದ ಕೆಲವು ಲಕ್ಷಗಳಜನರನ್ನು ಕಳೆದುಕೊಳ್ಳುವಂತೆ ಮಾಡಿದವರು ಹಿಂದೂ ಹಿರಿಯರೆ ಅಲ್ಲವೇ! ಹಾಗೆ ಮಾಡುವುದಕ್ಕೆ ಕಾರಣ ಕುಲವಿವಕ್ಷ ಎಂದು ಕಣ್ಣು ತೆರೆದು ನೋಡುವವರಿಗೆ ಯಾರಿಗಾದರೂ ಕಾಣಿಸುತ್ತದೆ. ಈ ದಿನ ಕೂಡಾ ಅದೇ ವಿಧಾನ ಮುಂದು ವರೆಯುವುದಕ್ಕೆ ನಾವು ಚಿಂತಿಸುತ್ತಿದ್ದೇವೆ. ನಮ್ಮ ಬೋಧನೆಗಳನ್ನು ತಡೆದ ಹಿಂದೂಗಳು, ನಮ್ಮ ಪ್ರಚಾರವನ್ನು ತಡೆಗಟ್ಟಿದ ಹಿಂದೂಗಳು, ನಮ್ಮ ಭಕ್ತರ ಮೇಲೆ ದಾಳಿಗಳು ಮಾಡಿದ ಹಿಂದೂಗಳು ಈ ದಿನ ಇದ್ದಾರೆ. ಹಿಂದೂಗಳಾದ ನಮ್ಮ ಮೇಲೆಯೇ ದಾಳಿಗಳಿಗೆ ಪ್ರೇರೇಪಿಸುವ ಹಿಂದೂ ಮತರಕ್ಷಣೆ ಸಂಸ್ಥೆಗಳು ಇವೆಯೆಂದರೇ ಆ ಸಂಸ್ಥೆಗಳ ಹಿರಿಯರು ನಮ್ಮ ಮೇಲೆ ಉಳಿದ ಹಿಂದೂಗಳನ್ನು

ಪ್ರೇರೆಪಿಸುತ್ತಿದ್ದಾರೆಂದರೇ ಕೇವಲ ಕುಲ ವಿವಕ್ಷಯೆಂದು ತಿಳಿಯುತ್ತಿದೆ. ಆ ದಿನದ ಬುದ್ಧನು ಕ್ಷತ್ರಿಯನು. ಈ ದಿನ ನಾವು ಕಮ್ಮ (ಚೌದರಿ) ಕುಲಕ್ಕೆ ಸೇರಿದವರು. ಆದ್ದರಿಂದ ನಾವು ಹೇಳುವ ಭಗವದ್ಗೀತೆ ಪರಮತ ಸಂಬಂಧವಾದುದಂತೆ. ಭಗವದ್ಗೀತೆ ಪರಮತಕ್ಕೆ ಸಂಬಂಧಿಸಿರುವುದು ಅಂದಾಗ ಅವರು ಹಿಂದೂ ರಕ್ಷಕರಾ, ಹಿಂದೂ ಭಕ್ಷಕರಾ ಓದುಗರು ನೀವೇ ಆಲೋಚಿಸಿರಿ! ಅದ್ವೈತ, ದ್ವೈತ ಸಿದ್ಧಾಂತಗಳಂತೆ ತ್ರೈತ ಸಿದ್ಧಾಂತವನ್ನು, ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳನ್ನು ಬುನಾದಿಯಾಗಿ ಮಾಡಿ ಹೇಳುತ್ತಿದ್ದರೂ, ನಮ್ಮದು ಕ್ರೈಸ್ಥವವಂತೆ. ಹಿಂದೂವಾಗಿರುವ ನನ್ನನ್ನೇ ಕ್ರೈಸ್ಥವನು ಎನ್ನುವ ಸಂಸ್ಕಾರವಂತರಿರುವ ಈಗಿನ ಹಿಂದೂಗಳು ಇತರೆ ಮತಗಳ ಮುಂದೆ ಅವಮಾನಮಾಡುವ ಪ್ರಶ್ನೆಗಳನ್ನು ಕೇಳುವುದು ಒಳ್ಳೆಯದಲ್ಲವೆಂದು, ಆ ಪ್ರಶ್ನೆಯಲ್ಲಿನ ತಪ್ಪುಗಳನ್ನು ಹೇಳುತ್ತಿದ್ದೇವೆ. ಈಗಲಾದರೂ ಗ್ರಹಿಸಿರಿ.

**ಅವರ ಪ್ರಶ್ನೆ:– ಉಳಿದ ಮತಗಳೆಲ್ಲ ಒಂದೊಂದು ಒಂದೊಂದು ಪ್ರವಕ್ತನ ಮೇಲೆ ಆಧಾರಪಟ್ಟು ನಿರ್ಮಿಸಲ್ಪಟ್ಟವಾದರೆ, ಹಿಂದೂ ಮತ ಮಾತ್ರ ಯಾವ ವ್ಯಕ್ತಿ ಮೇಲೆ ಆಧಾರ ಪಡಲಿಲ್ಲವೆಂದು ನಿಮಗೆ ತಿಳಿದಿದೆಯಾ?**

**ನಮ್ಮ ಉತ್ತರ :–** ಹಿಂದೂತ್ವ ಮೊದಲು ಮತ ಅಲ್ಲವೆಂದು, ಕ್ರೈಸ್ಥವ ಬಂದ ನಂತರ ಹಿಂದೂಮತವನ್ನು ಪ್ರಜಗಳೇ ಇಟ್ಟುಕೊಂಡಿದ್ದಾರೆಂದು, ಅಲ್ಲಿಯವರೆಗು ಅದು ಮತ ಅಲ್ಲವೆಂದು ನಿಮಗೆ ತಿಳಿದಿದೆಯಾ? ಎಂದು ನಾವು ಕೇಳಬೇಕಾಗಿ ಬರುತ್ತಿದೆ. ಹಿಂದೂತ್ವ ಒಂದರ ಅಸಲು ಹೆಸರು ಇಂದೂ ಪದದಿಂದ ಇದೆ. ಕೇವಲ 150 ವರ್ಷಗಳ ಕೆಳಗೆ ಇಂದೂ ಎನ್ನುವ ಪದ ಹಿಂದೂವಾಗಿ ಮಾರ್ಪಟ್ಟಿದೆಯೆಂದು ನಿಮಗೆ ತಿಳಿದಿದೆಯಾ? ಇಂದೂ ಎಂದರೇ ಜ್ಞಾನಿ ಅಥವಾ ಜ್ಞಾನ. ಒಂದುಸಮಯದಲ್ಲಿ ದೇಶದಲ್ಲಿ ಹೆಚ್ಚಿನ ಭಾಗ ಜ್ಞಾನಿಗಳು ಇರುವುದರಿಂದ ಆದಿನ ಭಾರತದೇಶವನ್ನು 'ಇಂದೂ ದೇಶ' ಎಂದು ಕರೆದಿದ್ದಾರೆ. ಇಂದೂ ದೇಶ ಎಂದರೇ ಜ್ಞಾನಿಗಳ ದೇಶ ಎಂದು ಅರ್ಥ. ಇಂದೂ ಎಂದರೇ ಜ್ಞಾನಿ ಎಂದು ಅರ್ಥ, ಆದ್ದರಿಂದ ಮತ ಎನ್ನುವ ಪದ ಜ್ಞಾನಿಗಳಿಗೆ

ಅನ್ವಯಿಸುವುದಿಲ್ಲ. ಜ್ಞಾನಮಾರ್ಗ ಎಂದು ಹೇಳುವುದಕ್ಕೆ ಜ್ಞಾನ ಪಥವೆಂದು ಹೇಳಬಹುದು. ಆದ್ದರಿಂದ ಜ್ಞಾನಕ್ಕೆ ಪಥ ಇರುತ್ತದೆ ಹೊರತು ಮತ ಇರುವುದಿಲ್ಲ. ಆದ್ದರಿಂದ ಇಂದೂತ್ವ ಎಂದಿಗೂ ಮತವಲ್ಲ. ಈದಿನ ಇಂದೂಗಳಿಗೆ ಮತವನ್ನು ಅಂಟಿಸುವುದು ಸರಿಯಾದ ಕೆಲಸವಲ್ಲ. ಇಂದೂವುದು ಪಥವೇ ಹೊರತು, ಮತವಲ್ಲ. ಆದ್ದರಿಂದ ಈಗಲೂ ಹಿಂದೂ ಮತ ಎನ್ನುವುದು ಸರಿಯಲ್ಲ. ಹಿಂದೂ ಸ್ವಾಮೀಜಿಗಳಾದ ಬಹಳಜನ ಹಿಂದೂ ಎನ್ನುವ ಪದವನ್ನು ಒಪ್ಪಿಕೊಳ್ಳಲಿಲ್ಲ. ಚಿನ್ನಜೀಯರ್ ಸ್ವಾಮಿಯವರು ಈ ಮಾತನ್ನು ಪೂರ್ತಿಯಾಗಿ ಖಂಡಿಸಿದ್ದಾನೆ. ಹಾಗೆ ಎಂದರೇ ನಮ್ಮ ತಲೆಯನ್ನು ನಾವೇ ತೆಗೆದುಕೊಂಡಂತೆ ಎಂದು ಕೂಡಾ ಹೇಳಿದ್ದಾರೆ. ಇದರಿಂದ ನಮ್ಮದು ಹಿಂದೂ ಮತವೆಂದು ಹೇಳಿಕೊಳ್ಳುವುದು ಒಳ್ಳೆಯದಲ್ಲ. ಇಂದೂತ್ವ ಎಂದಿಗೂ ಮತವಲ್ಲ.

ಪ್ರತಿ ಮತ ಒಬ್ಬ ಪ್ರವಕ್ತನ ಮೇಲೆ ಆಧಾರಪಟ್ಟು ನಿರ್ಮಿಸಲ್ಪಟ್ಟಿದೆ ಎಂದು ಹೇಳಿದ್ದಾರೆ. ಪ್ರವಕ್ತಗು ಮತಕ್ಕು ಯಾವ ಸಂಬಂಧವಿಲ್ಲ. ಏಕೆಂದರೇ! ಎಷ್ಟೋಜನ ಪ್ರವಕ್ತರು ಹುಟ್ಟಿದ್ದಾರೆ. ಅವರನ್ನು ಅನುಸರಿಸಿ ಮತಗಳು ಹುಟ್ಟಿದ್ದರೇ ಈದಿನ ಮತಗಳು ನೂರಾರು ಸಂಖ್ಯೆಯಲ್ಲಿ ಇರುತ್ತಿದ್ದವು. ಗ್ರಂಥಗಳನ್ನು ಅನುಸರಿಸಿ ಮತಗಳು ಬಂದಿವೆ, ಅದು ಕೂಡಾ ಮನುಷ್ಯರು ನಿರ್ಮಿಸಿರುವವೇ ಮತಗಳು. ಬೈಬಲ್ ಗ್ರಂಥವನ್ನು ಅಡ್ಡ ಇಟ್ಟುಕೊಂಡು ಪ್ರಜೆಗಳು ಕ್ರೈಸ್ಥವ ಮತವನ್ನು ತಯಾರು ಮಾಡಿಕೊಂಡಿದ್ದಾರೆ. ಯೇಸು ಪ್ರವಕ್ತ ಆದರೂ ಆತನು ಬದುಕಿರುವಾಗ ಕ್ರೈಸ್ಥವ ಮತ ತಯಾರಾಗಲಿಲ್ಲ. ಯೇಸು ಪ್ರವಕ್ತ ಮರಣಿಸಿದ ಏಳೆಂಟು ವರ್ಷಗಳಿಗಾಗಲಿ ಕ್ರೈಸ್ಥವ ಮತ ತಯಾರಾಗಲಿಲ್ಲ. ಇದನ್ನನುಸರಿಸಿ ನೋಡಿದರೆ ಪ್ರವಕ್ತರನ್ನನುಸರಿಸಿ ಮತಗಳು ತಯಾರು ಆಗಲಿಲ್ಲ. ಗ್ರಂಥಗಳನ್ನನುಸರಿಸಿ ಅದರಲ್ಲಿನ ಜ್ಞಾನ ಅರ್ಥವಾದುದನ್ನು ಅನುಸರಿಸಿ ಮನುಷ್ಯರೇ ಮತಗಳನ್ನು ನಿರ್ಮಿಸಿಕೊಂಡಿದ್ದಾರೆ. ಮುಹಮ್ಮದ್ ಪ್ರವಕ್ತ ಇದ್ದ ದಿನಗಳಲ್ಲಿ ಕೂಡಾ ಮತ ತಯಾರಾಗಲಿಲ್ಲ. ಮುಹಮ್ಮದ್ ಪ್ರವಕ್ತ ದೇವರನ್ನು ವಿಶ್ವಾಸಿಸಿದವನನ್ನು 'ಮುಸ್ಲಿಮ್' ಎಂದು ಹೇಳಿದ್ದಾನೆ ಹೊರತು ಆ ದಿನ ಮುಸ್ಲಿಮ್ ಮತವಿಲ್ಲ. ಮುಹಮ್ಮದ್

ಪ್ರವಕ್ತರವರು ಮರಣಿಸಿದ ನಂತರ ಕೆಲವು ವರ್ಷಗಳಿಗೆ ಹದೀಸು ಗ್ರಂಥಗಳು ಬರೆದ ಹಿರಿಯರು ಮುಸ್ಲಿಮ್ ಮತವನ್ನು ತಯಾರು ಮಾಡಿದ್ದಾರೆ. ವಾಸ್ತವವಾಗಿ ಖುರ್‌ಆನ್ ಗ್ರಂಥವನ್ನನುಸರಿಸಿ ಮುಸ್ಲಿಮ್ ಮತ ತಯಾರಾಗಲಿಲ್ಲ. ಹದೀಸು ಗ್ರಂಥವನ್ನನುಸರಿಸಿ ಮುಸ್ಲಿಮ್ ಮತ, ಮತ ನಿಯಮಗಳು ತಯಾರಾಗಿವೆ. ವಾಸ್ತವವಾಗಿ ಒಂದು ಹಿಂದೂ ಮತಕ್ಕೆ ಅಲ್ಲ, ಮೂರು ಮತಗಳಿಗು ಪ್ರವಕ್ತರು ಇಲ್ಲ. ಕ್ರೈಸ್ಥವ ಮತವನ್ನು ನೋಡಿ ಹಿಂದೂಮತ ತಯಾರಾದರೆ, ಕ್ರೈಸ್ಥವ ಮತದಂತೆ ಹದೀಸು ಪಂಡಿತರು ಮುಸ್ಲಿಮ್ ಮತವನ್ನು ನಿರ್ಮಿಸಿದ್ದಾರೆ. ಇದೆಲ್ಲವೂ ಚರಿತ್ರೆಯನ್ನು ಪರಿಶೀಲಿಸಿದವರಿಗೆ ತಿಳಿಯುತ್ತದೆ. ಇದನ್ನನುಸರಿಸಿ ನೋಡಿದರೆ ಈದಿನ ಹಿಂದೂಗಳು ಇತರೆ ಮತಗಳನ್ನು ಪ್ರಶ್ನಿಸಲುಹೋಗಿ ತಾವೇ ಪ್ರಶ್ನಿಸಲ್ಪಡುವ ಸ್ಥಿತಿಯನ್ನು ಏರ್ಪಡಿಸಿಕೊಳ್ಳುವುದು ಚಿಂತಿಸುವಂತಹ ವಿಷಯ. ಹೊಡೆಯಲು ಹೋಗಿ ಹೊಡೆಸಿಕೊಂಡಂತೆ ಇತರೆ ಮತಗಳನ್ನು ಪ್ರಶ್ನಿಸಲುಹೋಗಿ, ಕೊನೆಗೆ ತಿಳುವಳಿಕೆಯಿಲ್ಲದ ಪ್ರಶ್ನೆಯಿಂದ ಪ್ರಶ್ನಿಸಲ್ಪಡುತ್ತಿದ್ದಾರೆ.

**ಅವರ ಪ್ರಶ್ನೆ :– ಉಳಿದ ಮತಗಳು ಹುಟ್ಟಿದ ಕಾಲಗಳು ಹೇಳಬಲ್ಲರು. ಆದರೆ ಹಿಂದೂ ಮತ ಅನಾದಿಯಾಗಿದೆಯೆಂದು ನಿಮಗೆ ತಿಳಿದಿದೆಯಾ? ಅದಕ್ಕೇ ಅದನ್ನು ಮಾನವ ಧರ್ಮವೆಂದು, ಸನಾತನ ಧರ್ಮವೆಂದು ಕರೆಯುತ್ತಾರೆಂದು ನಿಮಗೆ ತಿಳಿದಿದೆಯಾ?**

**ನಮ್ಮ ಉತ್ತರ :–** ಹಿಂದೂಮತ ಕ್ರೈಸ್ಥವ ಮತದ ನಂತರ ಎರಡನೆ ಮತವಾಗಿ ಹುಟ್ಟಿದೆಯೆಂದು ನಿಮಗೆ ತಿಳಿದಿದೆಯಾ ಎಂದು? ನಾವು ಕೇಳುತ್ತಿದ್ದೇವೆ. ಹಿಂದೂ ಮತದಲ್ಲಿ ಹಿಂದೂಗಳಾಗಿ ಇರುವವರು ತಮ್ಮ ಮತ ಯಾವಾಗ ಹುಟ್ಟಿದೆಯೆಂದು ತಿಳಿಯದೆ ಇತರರನ್ನು ಪ್ರಶ್ನೆಗಳು ಕೇಳಿದರೆ ಏನು ಚೆನ್ನಾಗಿರುತ್ತದೆ. ವಾಸ್ತವಕ್ಕೆ ನಮ್ಮದು ಮತವೇ ಅಲ್ಲ. ಪಥವೆಂದು ಹೇಳಿಕೊಳ್ಳಬೇಕು. ಉಳಿದ ಮತಗಳು ಯಾವಾಗ ಹುಟ್ಟಿರುವುದು ಹೇಳಬಹುದು. ಹಾಗೆ ಹಿಂದೂ ಮತ ಯಾವಾಗ ಹುಟ್ಟಿದೆಯೆಂದು ಕೂಡಾ ಹೇಳಬಹುದು. ಕ್ರೈಸ್ಥವ ಮತ 2000 ವರ್ಷಗಳ ಸಮಯದಲ್ಲಿ ಹುಟ್ಟಿದ್ದರೆ, ಹಿಂದೂಮತ 1995 ವರ್ಷಗಳ ಸಮಯದಲ್ಲಿ

ಹುಟ್ಟಿದೆಯೆಂದು ಹೇಳಬಹುದು. ಮೊದಲು ಇಲ್ಲದ ಮತ ಬರಬೇಕೆಂದರೆ ಅದಕ್ಕೆ ಸ್ವಲ್ಪ ಚರಿತ್ರೆ ಇರುತ್ತದೆ. ಆ ಚರಿತ್ರೆ ಪ್ರಕಾರ ನೋಡಿದರೆ ಕ್ರೈಸ್ಥವ ಮತ ಹುಟ್ಟಿದ ನಂತರ ಐದು ವರ್ಷಗಳಿಗೆ ಹಿಂದೂಮತ ಹುಟ್ಟಿದೆ. ಅಲ್ಲಿಯವರೆಗು ಅದು ಮತವೇ ಅಲ್ಲ.

**ಅವರ ಪ್ರಶ್ನೆ:– ಉಳಿದ ಮತ ಗ್ರಂಥಗಳೆಲ್ಲ ಅವುಗಳ ಪ್ರವಕ್ತರ ಜೀವಿತಗಳ ಆಧಾರವಾಗಿ ಬರೆಯಲ್ಪಟ್ಟ ಪುಸ್ತಕಗಳು. ಆದರೇ ವೇದಗಳು ಒಬ್ಬರು ಬರೆದಿರುವವಲ್ಲ. ತಪಸ್ಸು ಮುಖಾಂತರ ದರ್ಶಿಸಿರುವವೆಂದು ನಿಮಗೆ ತಿಳಿದಿದೆಯಾ?**

**ನಮ್ಮ ಉತ್ತರ :–** ಯಾವುದೋ ಒಂದು ಮಾತನಾಡಿದರೆ ಹೇಗೆ ಸರಿಹೋಗುತ್ತದೆ? ಇತರೆ ಮತಗಳನ್ನು ಪ್ರಶ್ನೆಗಳನ್ನು ಕೇಳುವಾಗ ಹಿಂದೂಗಳು ಗರ್ವವಾಗಿ ತಲೆಯೆತ್ತಿಕೊಳ್ಳುವಂತೆ ಪ್ರಶ್ನಿಸಬೇಕು. ಹಾಗಲ್ಲದೆ ಪ್ರಾಥಮಿಕ ಜ್ಞಾನ ಸ್ವಲ್ಪವೂ ತಿಳಿಯದೆ ಪ್ರಶ್ನಿಸಿದರೇ ಅದು ತಿಳುವಳಿಕೆಯಿಲ್ಲದ ಪ್ರಶ್ನೆಯಾಗುತ್ತದೆ. ಅದರಲ್ಲಿನ ಸತ್ಯ ತಿಳಿದು, ಒಬ್ಬ ವ್ಯಕ್ತಿ ತಿರುಗಿ ಪ್ರಶ್ನಿಸಿದರೆ ಬಾಯಿ ಬಿಡಲಾರದ ಪರಿಸ್ಥಿತಿ ಏರ್ಪಡುತ್ತದೆ. ಇಲ್ಲಿ 'ವೇದಗಳು ಒಬ್ಬರು ಬರೆದಿರುವವಲ್ಲ, ತಪಸ್ಸು ಮುಖಾಂತರ ದರ್ಶಿಸಿರುವವೆಂದು' ಹೇಳಿದ್ದೀರ. ತಪಸ್ಸು ಎಂದರೇ ಏನೊ ತಿಳಿದಿದೆಯಾ? **"ತಪಸ್ವಿಭ್ಯೋಧಿಕೊ"** "ತಪಸ್ಸು ಮಾಡುವವರಿಗಿಂತ ಅಧಿಕರಿದ್ದಾರೆಂದು" ಭಗವದ್ಗೀತೆಯಲ್ಲಿನ ಆ ಮಾತಿನ ಮೂಲಕ ತಿಳಿಯುತ್ತಿದೆ. ತಪಸ್ಸು ಮುಖಾಂತರ ವೇದಗಳು ಕಾಣಿಸುತ್ತವೆಂದು ಹೇಳುವುದು ಮತ್ತಷ್ಟು ವಿಡ್ಡೂರ. ವೇದಗಳು ಒಬ್ಬರು ಬರೆದಿರುವವು ಅಲ್ಲ ಎಂದು ಹೇಳಿದ್ದೀರ. ವೇದಗಳು ಬರೆದಿರುವವು ಅಲ್ಲ ಎಂದು ಹೇಳುವುದನ್ನನುಸರಿಸಿ ಈ ಪ್ರಶ್ನೆ ಹಾಕಿದವರಿಗೆ ಚರಿತ್ರೆ ಸ್ವಲ್ಪವೂ ತಿಳಿಯದೆಂದು ಅರ್ಥವಾಗುತ್ತಿದೆ. ಚರಿತ್ರೆ ಏನೆಂದು ತಿಳಿಯದಿದ್ದರೂ ಇತರರನ್ನು ವಿಮರ್ಶಿಸಿದರೆ ಸರಿಹೋಗುತ್ತದಾ? ವೇದಗಳು ದ್ವಾಪರ ಯುಗದಲ್ಲಿ ವ್ಯಾಸನಿಂದ ಬರೆಯಲ್ಪಟ್ಟಿವೆ. ವ್ಯಾಸನು, ವೇದಗಳನ್ನು, ಪುರಾಣಗಳನ್ನು ಬರೆಯುವುದರಿಂದ, ಅವುಗಳನ್ನು ಎಲ್ಲರೂ ಓದಿ ವೇದಗಳು ದೊಡ್ಡವೆಂದು ಅಂದುಕೊಳ್ಳುವುದರಿಂದ, ದೇವರು ಮನುಷ್ಯನ ಅವತಾರದೊಳಗೆ ಬಂದು ಭಗವದ್ಗೀತೆಯನ್ನು ಹೇಳಬೇಕಾಗಿ

ಬಂದಿದೆ. ಭಗವದ್ಗೀತೆಯಲ್ಲಿ ಸಾಂಖ್ಯ ಯೋಗದಲ್ಲಿ **"ತ್ರೈಗುಣ್ಯ ವಿಷಯಾ ವೇದಾ"** ಎಂದು ಹೇಳಿದ್ದಾರೆ. ಅದರ ಅರ್ಥ ಮೂರು ಗುಣಗಳ ವಿಷಯಗಳೇ ವೇದಗಳು ಎಂದು ಹೇಳಲ್ಪಟ್ಟಿದೆ. ಗುಣಗಳಿಂದ ಕೂಡಿಕೊಂಡಿರುವವು ವೇದಾಗಳಾದಾಗ **"ಗುಣಮಯಿ ಮಮ ಮಾಯಾ"** ಎಂದು ಹೇಳಿದ್ದಾರೆ. 'ಗುಣಗಳಿಂದ ಕೂಡಿಕೊಂಡಿರುವುದು ನನ್ನ ಮಾಯೆ' ಎಂದು ಹೇಳಿದ್ದಾರೆ. ಇದನ್ನನುಸರಿಸಿ **'ವೇದಗಳು ಮಾಯೆ'** ಎಂದು ತಿಳಿದುಹೋಗುತ್ತಿದೆ. ಮಾಯೆಯನ್ನು ಜಯಿಸುವುದಕ್ಕೆ ಭಗವದ್ಗೀತೆಯಲ್ಲಿ ಜ್ಞಾನವನ್ನು ಹೇಳಿದ್ದಾನೆ.

ಇದನ್ನನುಸರಿಸಿ ನೋಡಿದರೆ ವೇದಗಳು ದೊಡ್ಡದಾಗಿ ಹೇಳಿಕೊಳ್ಳುವ ಗ್ರಂಥಗಳು ಕೂಡಾ ಅಲ್ಲ. ಆದರೂ ಹಿಂದೂಗಳು ಕೆಲವರು ವೇದಗಳ ಅಧ್ಯಾಯನ ಮಾಡುತ್ತಾ ಪ್ರತಿ ಆರಾಧನೆಯಲ್ಲಿ ವೇದಮಂತ್ರಗಳನ್ನು ಉಪಯೋಗಿಸುತ್ತಿದ್ದಾರೆ. ಹಿಂದೂಗಳು ವೇದಗಳೇ ಮುಖ್ಯವೆಂದು ಹೇಳುತ್ತಿದ್ದಾರೆ. ಪ್ರಥಮ ದೈವಗ್ರಂಥವಾದ ಭಗವದ್ಗೀತೆಯನ್ನು ಸ್ವತಃವಾಗಿ ದೇವರೇ ಭಗವಂತನಾಗಿ ಬಂದು ಹೇಳಿದರೆ, ಅಷ್ಟೇ ಅಲ್ಲದೆ ವೇದಗಳನ್ನು ಮಾಯೆಯೆಂದು, ಗುಣಗಳಿಂದ ಕೂಡಿಕೊಂಡಿರುವ ವೆಂದು ಹೇಳಿದರೂ, ಏಕೆ ವೇದಗಳ ಮೇಲೆ ಅಷ್ಟು ಶ್ರದ್ಧೆಯನ್ನು ತೋರಿಸುತ್ತಿದ್ದಾರೆ? ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗದಲ್ಲಿ, 48, 53 ಶ್ಲೋಕಗಳಲ್ಲಿ **"ವೇದಗಳಿಂದ ದೇವರು ತಿಳಿಯುವುದಿಲ್ಲ."** ಎಂದು ಹೇಳಿದ್ದರೂ ಅದನ್ನು ನೋಡದಂತೆ, ನೋಡಿದರೂ ಲೆಕ್ಕಿಸದೆ, ವೇದಗಳೇ ಹಿಂದೂಗಳಿಗೆ ಪ್ರಾಮಾಣಿಕ ಗ್ರಂಥಗಳೆನ್ನುವುದು ಆಶ್ಚರ್ಯ ಅಲ್ಲವೇ!

ವೇದಗಳನ್ನು ಗ್ರಂಥರೂಪವಾಗಿ ಮಾಡಿದ ವ್ಯಾಸನೇ ಕೊನೆಯಲ್ಲಿ ಭಗವದ್ಗೀತೆಯನ್ನು ತಿಳಿದ ನಂತರ ತಾನು ವೇದಗಳನ್ನು ಬರೆದಿರುವುದಕ್ಕೆ ನಾಚಿಕೆಪಟ್ಟು, ತಾನು ಮಾಡಿದ ತಪ್ಪನ್ನು ಸರಿತಿದ್ದುಕೊಳ್ಳುವುದಕ್ಕೆ ಪಶ್ಚಾತ್ತಾಪಪಟ್ಟ ವ್ಯಾಸನು ಭಗವದ್ಗೀತೆಯನ್ನು ಗ್ರಂಥರೂಪವಾಗಿ ಮಾಡಲು ಪ್ರಾರಂಭಮಾಡಿದ್ದಾನೆ. ಭಗವದ್ಗೀತೆಯನ್ನು ಪೂರ್ತಿ ಮಾಡಿ ಎಷ್ಟೋ ಸಂತೋಷಪಟ್ಟಿದ್ದಾನೆ. ತಾನು ಬರೆದ ಭಗವದ್ಗೀತೆಯಲ್ಲಿ ವೇದಗಳು, ಯಜ್ಞಗಳು, ತಪಸ್ಸುಗಳು ಅಧರ್ಮಗಳಾಗಿ

ಇವೆಯೆಂದು ಬರೆದಿದ್ದಾನೆ. ವೇದಗಳ ಕುರಿತು ತಿಳಿಯದಿರುವಾಗ ಗ್ರಂಥರೂಪ ಮಾಡಿರುವುದರಿಂದ ಎಷ್ಟೋಜನ ಅಧರ್ಮಗಳ ಪಾಲಾದಂತೆ ಗ್ರಹಿಸಿ, ತನ್ನ ತಪ್ಪಿಗೆ ಪ್ರಾಯಶ್ಚಿತ್ತವಾಗಿ ಭಗವದ್ಗೀತೆಯನ್ನು ರಚಿಸುವುದೇ ಪರಿಷ್ಕಾರವೆಂದು ತಿಳಿದು, ಗೀತೆಯನ್ನು ರಚಿಸಿದ ನಂತರ ತೃಪ್ತಿಹೊಂದಿದ್ದಾನೆ. ಈ ವಿಷಯ ಹೊರಗಿನ ಪ್ರಪಂಚಕ್ಕೆ ತಿಳಿದಿಲ್ಲ. ಹಿಂದೂಗಳಿಗೆ ಪ್ರಾಮಾಣಿಕ ಗ್ರಂಥ ಪ್ರಥಮ ದೈವಗ್ರಂಥವೆಂದು ಹೆಸರುವಾಸಿಯಾದ ಭಗವದ್ಗೀತೆ. ದೇವರು ಭಗವಂತನಾಗಿ ಬಂದು ಹೇಳಿರುವುದು ಭಗವದ್ಗೀತೆ. ಭಗವದ್ಗೀತೆ ಆತ್ಮಜ್ಞಾನವನ್ನು ಸಂಪೂರ್ಣ ವಾಗಿ ಬೋಧಿಸಿದೆ. ಆದ್ದರಿಂದ ಭಗವದ್ಗೀತೆ ಬ್ರಹ್ಮವಿದ್ಯಾ ಶಾಸ್ತ್ರವಾಗಿ ಹೆಸರುಹೊಂದಿದೆ. ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಹೇಳಿದಬೋಧನೆ ಇರುವುದರಿಂದ ಭಗವದ್ಗೀತೆಯನ್ನು ಸಂಪೂರ್ಣ ಬ್ರಹ್ಮವಿದ್ಯಾ ಶಾಸ್ತ್ರ ಎಂದು ಹೇಳಬಹುದು.

'ವೇದಗಳು ತ್ರಿ ಗುಣಗಳಿಂದ ಕೂಡಿಕೊಂಡಿವೆಯೆಂದು' ಭಗವದ್ಗೀತೆ ಯಲ್ಲಿ ಸಾಂಖ್ಯ ಯೋಗದಲ್ಲಿ 45ನೇ ಶ್ಲೋಕದಲ್ಲಿ ಹೇಳಿದ್ದಾರೆ. 'ಗುಣಗಳೇ ಮಾಯೆ' ಎಂದು ವಿಜ್ಞಾನ ಯೋಗದಲ್ಲಿ 14ನೇ ಶ್ಲೋಕದಲ್ಲಿ ಹೇಳಿದ್ದಾರೆ. ಈ ಎರಡು ಮಾತುಗಳನ್ನು ನೋಡಿದ ನಂತರ ಕೂಡಾ ವೇದಗಳು ಹಿಂದೂಗಳ ಪ್ರಮಾಣ ಗ್ರಂಥಗಳೆಂದು ಹೇಳುವುದು ದೊಡ್ಡ ತಪ್ಪು. ಭಗವದ್ಗೀತೆ ಬಾರದಮುನ್ನ ವೇದಗಳು ಪ್ರಾಮಾಣಿಕ ಗ್ರಂಥಗಳೆಂದು ವ್ಯಾಸನು ಹೇಳಿದ್ದಾನೆ. ಭಗವದ್ಗೀತೆ ಬಂದ ನಂತರ ವ್ಯಾಸನೇ ವೇದಗಳು ಮಾಯೆಯಿಂದ ಕೂಡಿಕೊಂಡಿರುವವೆಂದು ಹೇಳಿದ್ದಾನೆಂದು ಮರೆಯಬಾರದು.

**ಪ್ರಶ್ನೆ :– ರಾಮನು, ಕೃಷ್ಣನು, ಬುದ್ಧನು ಮೊದಲಾದವರು ಅವತಾರ ಪುರುಷರು ಒಂದೇ ಪರಬ್ರಹ್ಮ ಅವಶ್ಯಕತೆಯನ್ನು ಅನುಸರಿಸಿ ಅನೇಕ ಕಾಲಗಳಲ್ಲಿ, ಅನೇಕ ರೂಪಗಳನ್ನು ಧರಿಸುತ್ತಾನೆಂದು, ಅದಕ್ಕೇ ಹಿಂದೂಗಳು 'ಸೃಷ್ಟಿಯಲ್ಲಿರುವ ಮೂಲತತ್ವ ಒಂದೇ' ಅದನ್ನು ಋಷಿಗಳು ಅನೇಕ ಹೆಸರುಗಳಿಂದ ಕರೆಯುತ್ತಿದ್ದಾರೆ. (ಏಕಂ ಸತ್‌ವಿಪ್ರಾ ಬಹುದಾ ವದಂತಿ) ಎನ್ನುವ ಅದ್ಭುತ ಸತ್ಯವನ್ನು ಎಂದೋ ಕಂಡುಕೊಂಡಿದ್ದಾರೆಂದು ನಿಮಗೆ ತಿಳಿದಿದೆಯಾ?**

**ಉತ್ತರ :–** ರಾಮನು, ಕೃಷ್ಣನು, ಬುದ್ಧನು ಒಂದೇ ಎಂದವರು, ಹಿಂದೂತ್ವದಿಂದ ಬುದ್ಧನನ್ನು ಹೊರಗೆ ತಳ್ಳಿ ಬುದ್ಧನ ಮತ ಬೇರೆಯೆಂದು ಪ್ರಚಾರ ಮಾಡಿ, ಹಿಂದೂಮತದಿಂದ ಬೌದ್ಧಮತವನ್ನು ಬೇರೆ ಮಾಡಿದವರು ಈ ದಿನ ಬುದ್ಧನು, ರಾಮನು, ಕೃಷ್ಣನು ಎಲ್ಲರೂ ಒಂದೇ ದೇವರ ಅವತಾರವೇಯೆಂದು ಹೇಗೆ ಹೇಳುತ್ತಿದ್ದಾರೆ? ಹಿಂದೂ ಮತದಿಂದ ಬೌದ್ಧಮತವನ್ನು ಹೊರಗೆ ಕಿತ್ತು ನಿಮ್ಮ ಮತ ಬೇರೆ, ನಮ್ಮ ಮತ ಬೇರೆ ಎಂದವರೇ ಈ ದಿನ ಬುದ್ಧನನ್ನು ರಾಮನು, ಕೃಷ್ಣನಿಗೆ ಸಮಾನವಾಗಿ ಹೇಳಿದರೆ ನೋಡುವವರಿಗೆ ಹೇಗಿರುತ್ತದೊ ಆಲೋಚಿಸಿದ್ದೀರಾ? ನಿಮ್ಮ ಇಷ್ಟ ಬಂದಾಗ ಇಷ್ಟಬಂದಂತೆ ಮಾತನಾಡಿದರೆ ಕೇಳುವುದಕ್ಕೆ ಪ್ರಜೆಗಳು ಬುದ್ಧಿಯಿಲ್ಲದ ದದ್ದಮ್ಮರು ಅಲ್ಲವೆಂದು ತಿಳಿಯಿರಿ. ಈದಿನ ಹಿಂದೂ ಮತ ರಕ್ಷಕರೆಂದು ಹೆಸರು ಇಟ್ಟುಕೊಂಡರೂ ಮೊದಲು ನೀವೇ ಹಿಂದೂ ಧರ್ಮ ಭಕ್ಷಕರೆಂದು ಎಲ್ಲರಿಗೂ ತಿಳಿದಿದೆ.

**ಪ್ರಶ್ನೆ :– ಅನಂತವಾದ ದೇವರನ್ನು ಸೇರಿಕೊಳ್ಳುವುದಕ್ಕೆ ಅನಂತವಾದ ಮಾರ್ಗಗಳು ಏರ್ಪಟ್ಟಿವೆ. ಯಾವ ಹೆಸರಿನಿಂದ ಆರಾಧಿಸಿದರೂ ಸೇರುವುದು ಆ ಒಂದು ದೇವರನ್ನೇ ಎಂದು ಹಿಂದೂಗಳ ವಿಶ್ವಾಸ. ಆದ್ದರಿಂದ ಯಾವ ಮತಸ್ಥನಾದರೂ ತಮ್ಮ ದೇವರೇ ದೊಡ್ಡವನು. ಇತರೆ ದೇವರುಗಳು ದೊಡ್ಡವರು ಅಲ್ಲವೆಂದು ಹೇಳುತ್ತಿದ್ದಾರೆಂದರೇ ಅವರಿಗೆ ಯಾವ ದೇವರ ಬಗ್ಗೆ ಏನು ತಿಳಿದಿಲ್ಲ. ಸ್ವಲಾಭಾಪೇಕ್ಷೆಯಿಂದ ದೇವರನ್ನು ವ್ಯಾಪಾರ ವಸ್ತುವಾಗಿ ಬದಲಿಸಿ ಪ್ರಜೆಗಳನ್ನು ಮೋಸ ಮಾಡುತ್ತಿದ್ದಾರೆಂದು ಅರ್ಥ.**

**ಉತ್ತರ :–** ದೇವರು ಅನಂತವಾದವನು ಎನ್ನುವುದರಲ್ಲಿ ತಪ್ಪಿಲ್ಲ. ಆದರೇ ಆತನನ್ನು ಸೇರಿಕೊಳ್ಳುವುದಕ್ಕೆ ಅನಂತವಾದ ಮಾರ್ಗಗಳು ಇವೆಯೆನ್ನುವುದು ದೊಡ್ಡ ತಪ್ಪು. ಹಾಗೆ ಅನಂತವಾದ ಮಾರ್ಗಗಳು ಇರುವಾಗ, ದೇವರು ಪ್ರಜೆಗಳಿಗೆ ಏನು ಹೇಳದೆ ಸುಮ್ಮನೆ ಇರುತ್ತಿದ್ದನು. ಪ್ರಜೆಗಳಿಗೆ ಜ್ಞಾನದ ಅವಶ್ಯಕತೆ ಇಲ್ಲ. ಅವರ ಇಷ್ಟಬಂದಂತೆ ಅವರು ಆರಾಧಿಸಬಹುದು. ಯಾವ ಹೆಸರಿನಿಂದ ಪೂಜಿಸಿದರೂ ದೇವರಿಗೇ ಸೇರುವಾಗ **"ಯಾಂತಿ ದೇವವ್ರತಾನ್ ದೇವಾನ್"**

ಎಂದು ಹೇಳುವವನಲ್ಲ. "ಯಾವ ದೇವರನ್ನು ಪೂಜಿಸಿದರೆ ಆ ದೇವರಿಗೇ ಸೇರುತ್ತದೆ, ನನ್ನನ್ನು ಸೇರಲಾರೆ" ಎಂದು ಭಗವದ್ಗೀತೆಯಲ್ಲಿ ಹೇಳುವವನಲ್ಲ. ಹಾಗೆ ತಪ್ಪು ಮಾಡುತ್ತಿದ್ದಾರೆಂದು ತಿಳಿದ ದೇವರು ತನ್ನನ್ನು ಸೇರುವುದಕ್ಕೆ ಜ್ಞಾನವನ್ನು ಭಗವದ್ಗೀತೆಯಲ್ಲಿ ಬೋಧಿಸಿದ್ದಾನೆ. ತನನ್ನು ಸೇರುವುದಕ್ಕೆ ಬೇರೆ ಮಾರ್ಗಗಳು ಇಲ್ಲವೆಂದು, ತನ್ನನ್ನು ಸೇರುವುದಕ್ಕೆ ಮೂರೇ ಮಾರ್ಗಗಳು ಇವೆಯೆಂದು, ಅವುಗಳೇ ಯೋಗಮಾರ್ಗಗಳೆಂದು ಹೇಳಿದ್ದಾನೆ. ಆ ಮೂರು ಯೋಗಮಾರ್ಗಗಳ ಹೆಸರುಗಳೇ ಬ್ರಹ್ಮಯೋಗ, ಕರ್ಮಯೋಗ, ಭಕ್ತಿಯೋಗ. ಇದು ಸ್ವಂತವಾಗಿ ದೇವರೇ ಹೇಳಿರುವಾಗ ಅವುಗಳನ್ನು ಅಲ್ಲಗಳೆದು ಅನೇಕ ಮಾರ್ಗಗಳಿವೆಯೆಂದು ಹೇಳುವುದು ದೇವರ ನಿರ್ಣಯಕ್ಕು ದೇವರ ಜ್ಞಾನಕ್ಕು ಪೂರ್ತಿ ವಿರುದ್ಧ. ಹಾಗೆ ಹೇಳುವುದು ಹಿಂದೂತ್ವ ಅಲ್ಲ.

**ಪ್ರಶ್ನೆ :– ಕ್ರಿಸ್ತ ತನ್ನ 14ನೇ ವರ್ಷದಿಂದ 29ನೇ ವರ್ಷದ ವರೆಗು ಅಂದರೇ 16 ವರ್ಷಗಳ ಕಾಲ ಎಲ್ಲಿ ಕಳೆದಿದ್ದಾನೊ ತಿಳಿಸುತ್ತೀರಾ? ಆ ಕಾಲದಲ್ಲಿ ಭಾರತ ದೇಶದಲ್ಲಿನ ಕಾಶ್ಮೀರದಲ್ಲಿ ಬೌದ್ಧ ಆಶ್ರಮಗಳಲ್ಲಿ ಕಾಲ ಕಳೆದಿದ್ದಾನೆಂದು ರಷ್ಯಾದಲ್ಲಿನ ಒಂದು ದಿನ ಪತ್ರಿಕೆ ಪ್ರಕಟಿಸಿದೆ. ಇದಕ್ಕೆ ನಿಮ್ಮ ಸಮಾಧಾನ ಏನು?**

**ಉತ್ತರ :–** ಈ ಮಾತನ್ನು ಕೇಳುವುದರಿಂದ ನೀವು ಅನವಶ್ಯಕವಾಗಿ ಇತರೆ ಮತಗಳಲ್ಲಿ ಜೋಕ್ಯ ಮಾಡಿಕೊಂಡತ್ತಿದೆ. ಯಾರೋ ರಷ್ಯಾದವರು ಬರೆದ ಪತ್ರಿಕೆ ನಿಜವೆಂದು ನೀವು ಹೇಗೆ ಹೇಳುತ್ತೀರಾ? ಯೇಸು ತನ್ನ 29ನೇ ವರ್ಷ ಪೂರ್ತಿ ಆಗುವವರೆಗು ತನ್ನ ಮನೆಯಲ್ಲಿ ತಾಯಿ, ತಮ್ಮಂದಿರ ಮಧ್ಯ ಇರುತ್ತಾ ಕಟ್ಟಿಗೆ ಸಾಮಾನುಗಳ ಕೆಲಸ ಮಾಡುತ್ತಿದ್ದನು. ವಿದೇಶಗಳಲ್ಲಿ ಆಚಾರಿ ಕುಲಕ್ಕೆ ಸಮಾನವಾಗಿ ಹೇಳುವ ಕುಲದಲ್ಲಿ ಹುಟ್ಟಿ, ಕೈಕೆಲಸ ಮಾಡುತ್ತಾ ಮಂಚಗಳು, ಕುರ್ಚಿಗಳು, ಪೀಠಗಳನ್ನು ಮಾಡುತ್ತಿದ್ದನು. ತನ್ನ 29ನೇ ವರ್ಷ ಮುಗಿಯುತ್ತಲೇ ತಾಯಿಯೊಂದಿಗೆ ಹೇಳಿ ಮನೆಬಿಟ್ಟು ಬಂದಿದ್ದಾನೆ. ಮೂರು ವರ್ಷಗಳು ಇಜ್ರಯೇಲ್ ದೇಶದಲ್ಲಿ ಕಳೆದ ಯೇಸು ತನ್ನ ಶಿಲುಬೆ ಮರಣದ ನಂತರ ಇಂಡಿಯಾಗೆ ಬಂದು, ಗುಜರಾತ್‌ಗು ರಾಜಸ್ಥಾನ್‌ಗು ಮಧ್ಯೆ ಭಾಗದಲ್ಲಿ ಅರಣ್ಯ

ಪ್ರದೇಶದಲ್ಲಿ 30 ವರ್ಷಗಳು ಬದುಕಿದ್ದಾನೆಂದು ನಿರೂಪಣೆಗಳಿಂದಲೂ ಸಹ ಹೇಳಿದ್ದೇವೆ. ಆತನು ಹೇಗೆ ಮರಣಿಸಿರುವುದು, ಯಾರು ಸಮಾಧಿ ಮಾಡಿರುವುದು, ಎಲ್ಲಿ ಸಮಾಧಿ ಮಾಡಿರುವುದು ಕೂಡಾ ಹೇಳಿದ್ದೇವೆ. **"ಯೇಸು ಮರಣಿಸಿದ್ದಾನಾ? ಮರಣಿಸಲ್ಪಟ್ಟಿದ್ದಾನಾ?"** ಎನ್ನುವ ನಮ್ಮ ರಚನಾ ಗ್ರಂಥದಲ್ಲಿ ಈ ವಿಷಯವೆಲ್ಲಾ ಇದೆ ನೋಡಿರಿ. ಯಾರೋ ರಷ್ಯಾದವರು ಅದೂ ಅಸತ್ಯಗಳ ಹುತ್ತಗಳಾದ ನ್ಯೂಸ್‌ಪೇಪರ್ ಆಧಾರವಾಗಿ ಹೇಳುವ ಮಾತು ಪೂರ್ತಿ ಅಸತ್ಯ. ನಾವು ಮತಗಳಿಗೆ ಅತೀತವಾಗಿ ಸತ್ಯಶೋಧನೆ ಮಾಡಿದ್ದೇವೆ. ಆಗ ಎರಡು ಮತಗಳಲ್ಲಿರುವುದು ಒಂದೇ ದೇವರ ಜ್ಞಾನವೆಂದು, ಎರಡು ಮತಗಳಲ್ಲಿ ಹೇಳಿರುವುದು ಒಂದೇ ದೇವರನ್ನು ಕುರಿತೆಂದು, ಹೇಳಿದವನು ಕೂಡಾ ಒಬ್ಬನೇಯೆಂದು ತಿಳಿದಿದೆ. ಈ ವಿಷಯ ತಿಳಿಯಬೇಕೆಂದರೇ ನಮ್ಮ ರಚನೆಗಳಲ್ಲಿನ **"ಶ್ರೀ ಕೃಷ್ಣನು ದೇವರಾ? ಭಗವಂತನಾ!!"** ಎನ್ನುವ ಗ್ರಂಥದಲ್ಲಿ 'ಕೃಷ್ಣನ ಮರಣ ಲೋಕಕ್ಕೆ ಕಣ್ತೆರೆಸಿದೆ' ಎನ್ನುವುದು ಓದಿರಿ.

**ಪ್ರಶ್ನೆ :– ಯೇಸುಕ್ರಿಸ್ತು ಕನ್ಯೆಗೆ ಜನ್ಮಿಸಲಿಲ್ಲವೆಂದು, ಆತನಿಗೆ ನಾಲ್ವರು ಸೋದರರಿದ್ದಾರೆಂದು, ಆತನಿಗೆ ವಿವಾಹ ಆಗಿದೆಯೆಂದು, ಹೆಂಡತಿ ಹೆಸರು ಮೇರಿ ಮೆಗ್ದಾಲಿನ್ ಎಂದು, ಆತನು ಶಿಲುಬೆ ಮೇಲೆ ಮರಣಿಸಲಿಲ್ಲವೆಂದು, 1947ರಲ್ಲಿ ಜೆರೂಸಲೇಮ್‌ಗೆ ಹತ್ತಿರದಲ್ಲಿನ ಖುಮ್ರಾನ್ ಗುಹೆಗಳಲ್ಲಿ ಲಭಿಸಿದ ಪುರಾತನ ಹಿಬ್ರೂ ಭಾಷೆಯಲ್ಲಿ ಚರ್ಮದ ಮೇಲೆ ಬರೆಯಲ್ಪಟ್ಟ ಬರಹ ಪತ್ರಗಳು ರುಜುವು ಮಾಡಿವೆಯೆಂದು ನಿಮಗೆ ತಿಳಿದಿದೆಯಾ? ಈ ಸತ್ಯಗಳನ್ನು ಪ್ರಪಂಚಕ್ಕೆ ತಿಳಿಯದಂತೆ ಪ್ರಪಂಚ ಕ್ಯಾಥಲಿಕ್ ಕ್ರೈಸ್ಥವ ಕೇಂದ್ರ (ವಾಟಿಕನ್) ಸುಮಾರು 50 ವರ್ಷಗಳು ವಿಫಲಯತ್ನ ಮಾಡಿದೆಯೆಂದು ನಿಮಗೆ ತಿಳಿದಿದೆಯಾ?**

**ಉತ್ತರ :–** ನಾವು ಹಿಂದೂಗಳು. ನಮ್ಮ ಘನತೆ ದೊಡ್ಡದು. ಆದರೂ ಇತರರ ವಿಷಯವನ್ನು ಪ್ರಸ್ತಾವಿಸುವುದು ಚೌಕಬಾರ ಕೆಲಸವಾಗುತ್ತದೆ. ಇವೆಲ್ಲ ಅನವಶ್ಯವಾಗಿ ನಮ್ಮ ಮರ್ಯಾದೆಯನ್ನು ಕಳೆದುಕೊಳ್ಳುವ ಮಾತುಗಳು ಹೊರತು ಏನೂ ಅಲ್ಲ. ಮೇಲೆ ಪ್ರಸ್ತಾವಿಸಿರುವವೆಲ್ಲ ಸತ್ಯವೇ ಆದರೂ ನಮಗೆ ಬರುವ

ಲಾಭವೇನು? ವಿಜ್ಞರಾದವರು ಯಾರೂ ಹಾಗೆ ಮಾತನಾಡುವುದಿಲ್ಲ. ಆತನು ಹೇಗೆ ಹುಟ್ಟಿದರೂ, ಹೇಗೆ ಬೆಳೆದರೂ, ಹೆಂಡತಿ ಇದ್ದರೂ ಇಲ್ಲದಿದ್ದರೂ, ಆತನಲ್ಲಿ ನೋಡಬೇಕಾಗಿರುವುದು ಆಧ್ಯಾತ್ಮಿಕ ಜ್ಞಾನ. ಅಷ್ಟೇಹೊರತು ವ್ಯಕ್ತಿಗತ ವಿಷಯಗಳೊಳಗೆ ಇಳಿದು ನಾವು ಮಾತನಾಡಿದರೆ ಅವರು ಕೂಡಾ ನಿಮ್ಮ ಕೃಷ್ಣನು ಅಂತಹವನು, ಇಂತಹವನು ಎಂದಿದ್ದಾರೆಂದುಕೊಳ್ಳಿ ಆಗ ಎಲ್ಲಿಯೋ ಇರುವ ಕೃಷ್ಣನನ್ನು ಅನವಶ್ಯವಾಗಿ ಇತರರಿಂದ ವಿಮರ್ಶಿಸುವಂತೆ ಮಾಡಿದಂತಾ ಗುತ್ತದೆ.

ಯೇಸು ಜೀವನವನ್ನು ಕುರಿತು ಕ್ರೈಸ್ಥರಿಗೇ ಸರಿಯಾಗಿ ತಿಳಿದಿಲ್ಲ. ನಾನು ಕ್ರೈಸ್ಥರನ್ನು, ನಿಮ್ಮನ್ನು ಇಬ್ಬರನ್ನು ಸೇರಿಸಿ ಪ್ರಶ್ನಿಸುತ್ತೇನೆ. ನೀವಾಗಲಿ, ಅವರಾಗಲಿ, ಉತ್ತರ ಹೇಳಬಲ್ಲಿರಾ! ನೋಡಿರಿ. ಯೇಸು 63 ವರ್ಷಗಳಿಗೆ ಮರಣಿಸಿದ್ದಾನೆಂದು ಯಾರಿಗಾದರೂ ತಿಳಿದಿದೆಯಾ? ಆತನ ರಹಸ್ಯ ಜೀವನ 30 ವರ್ಷಗಳು ಸಾಗಿದೆಯೆಂದು ಹಿಂದೂಗಳಿಗಾಗಲಿ, ಕ್ರೈಸ್ಥರಿಗಾಗಲಿ ತಿಳಿದಿದೆಯಾ? ಆತನು ತನ್ನ ರಹಸ್ಯ ಜೀವನ 30 ವರ್ಷಗಳು ಭಾರತದೇಶದಲ್ಲಿ ಕಳೆದಿದ್ದಾನೆಂದು ಯಾರಿಗಾದರೂ ತಿಳಿದಿದೆಯಾ? ಯೇಸು ತನ್ನ ರಹಸ್ಯ ಜೀವನ ಇನ್ನೊಬ್ಬರೊಂದಿಗೆ ಕಳೆದಿದ್ದಾನೆ, ಜೊತೆಯಾಗಿದ್ದವರು ಯಾರೋ ತಿಳಿದಿದೆಯಾ? ಜೊತೆಗಿದ್ದವನು 20 ವರ್ಷಗಳು ಇದ್ದಾನೆಂದು ತಿಳಿದಿದೆಯಾ? ಯೇಸು ಮರಣಿಸಿದಾಗ ಆತನ ಶರೀರ ಒಂದು ನದಿ ತೀರದಲ್ಲಿ ಹೂತಿಡಲಾಗಿದೆ ಯೆಂದು ತಿಳಿದಿದೆಯಾ? ಯೇಸು ಶರೀರವನ್ನು ಮನುಷ್ಯರು ಯಾರೂ ಸಮಾಧಿ ಮಾಡಲಿಲ್ಲವೆಂದು ಯಾರಿಗಾದರೂ ತಿಳಿದಿದೆಯಾ? ಹೀಗೆ ಎಷ್ಟೋ ವಿಷಯಗಳು ಕ್ರೈಸ್ಥರಿಗೆ ತಿಳಿದಿಲ್ಲ. ಮನುಷ್ಯ ಕಾಣಿಸಿದರೇ ಅವನು ಧರಿಸಿದ ವಸ್ತ್ರಗಳನ್ನು ನೋಡಬಾರದು. ಅವನ ತಲೆಯಲ್ಲಿನ ಬುದ್ಧಿಯನ್ನು ನೋಡಬೇಕು. ಹಾಗೇ ಯೇಸು ಹೇಗೆ ಬದುಕಿದ್ದಾನೆನ್ನುವುದು ಸಮಸ್ಯೆಯಲ್ಲ, ಯೇಸು ಏನು ಬೋಧಿಸಿದ್ದಾನೆನ್ನುವುದೇ ಸಮಸ್ಯೆ. ಯೇಸು ಹೇಳಿದ ಜ್ಞಾನವನ್ನು ನೋಡುವುದು ವಿಜ್ಞರ ಕೆಲಸ. ಈ ವಿಷಯಗಳೆಲ್ಲ ತಿಳಿಯಬೇಕೆಂದರೇ ನಮ್ಮ ರಚನೆಯಲ್ಲಿನ

**"ಯೇಸು ಮರಣಿಸಿದ್ದಾನಾ? ಮರಣಿಸಲ್ಪಟ್ಟಿದ್ದಾನಾ?"** ಎನ್ನುವ ಚಿಕ್ಕ ಗ್ರಂಥವನ್ನು ಓದಿರಿ.

**ಪ್ರಶ್ನೆ :– ಪ್ರಸ್ತುತ ಪ್ರಾಶ್ಚಾತ್ಯ ದೇಶಗಳಲ್ಲಿ ನೂರಕ್ಕೆ 20 ಮಂದಿ ಕೂಡಾ ಚರ್ಚಿಗಳಿಗೆ ಹೋಗುವುದು ಇಲ್ಲವೆಂದು, ಆ ಸಂಖ್ಯೆ ದಿನದಿನಕ್ಕೆ ಕಡಿಮೆಯಾಗುತ್ತಿದೆಯೆಂದು ತಿಳಿಯುತ್ತಿದೆ. ಅದಕ್ಕೆ ಕಾರಣ ಏನೋ ನೀವು ಹೇಳಬಲ್ಲಿರಾ? ಅದಕ್ಕೆ ಕಾರಣ ಅವರಿಗೆ ಕ್ರೈಸ್ಥ ಮತದ ಮೇಲೆ ವಿಶ್ವಾಸ ಸಡಲಿಹೋಗುವುದು ಅಲ್ಲವೆ!**

**ಉತ್ತರ :–** ಆ ದೇಶಗಳಲ್ಲಿನ ಕ್ರೈಸ್ಥರು ಚರ್ಚಿಗೆ ಹೋದರೆ ನಮಗೇನು? ಹೋಗದಿದ್ದರೇ ನಮಗೇನು? ಅವರು ಚರ್ಚಿಗೆ ಹೋದರೆ ನಮಗೆ ಏನಾದರೂ ಮೋಕ್ಷ ಬರುತ್ತದಾ? ಹೋಗದಿದ್ದರೆ ಬರುವುದಿಲ್ಲವಾ! ಇವೆಲ್ಲ ಮತದ್ವೇಷದಿಂದ ಮಾತನಾಡುವ ಮಾತುಗಳೇ ಹೊರತು ಬೇರೆಯಲ್ಲ. ನಮಗೆ ಸಂಬಂಧವಿಲ್ಲದ ವಿಷಯ ಪ್ರಸ್ಥಾಪಿಸುವುದೇ ತಪ್ಪು. ಈ ದಿನ ನಮ್ಮ ದೇಶದಲ್ಲಿ ಹಿಂದೂಗಳು ಎಷ್ಟುಜನ ದೇವಾಲಯಗಳಿಗೆ ಹೋಗುವವರಿದ್ದಾರೆ? ಕೇವಲ 20 ರಷ್ಟು ಮಂದಿ ಮಾತ್ರವೇ ದೇವಾಲಯಗಳಿಗೆ ಹೋಗುತ್ತಿದ್ದಾರೆ. 80 ರಷ್ಟು ಮಂದಿ ದೇವಾಲಯ ಗಳೊಳಗೆ ಹೋಗದವರು ಇದ್ದಾರೆ. ಇದನ್ನು ಕುರಿತು ನೀವೇನು ಹೇಳುತ್ತೀರಾ? ನಮ್ಮ ವಿಷಯ ಅವರಿಗೆ ಅಗತ್ಯವಿಲ್ಲ. ಅವರ ವಿಷಯ ನಮಗೆ ಅಗತ್ಯವಿಲ್ಲ. ಅನವಶ್ಯವಾಗಿ ಇತರರ ವಿಷಯಗಳನ್ನು ಪ್ರಸ್ಥಾಪಿಸಬಾರದು.

**ಪ್ರಶ್ನೆ :– ಕಳೆದ ಎರಡು ಸಾವಿರ ವರ್ಷಗಳಲ್ಲಿ ಆತ್ಮಸಾಕ್ಷಾತ್ಕಾರವನ್ನು ಹೊಂದಿ ಪರಮ ಪದವನ್ನು ಸೇರಿಕೊಂಡ ಯೋಗಿಗಳು, ಋಷಿಗಳು, ಮುನಿಗಳು, ಮಹಾತ್ಮರು ಹಿಂದೂ ಧರ್ಮದಲ್ಲಿ ಬೇಕಾದಷ್ಟು ಇದ್ದಾರೆ. ಮತ್ತೆ ಕ್ರೈಸ್ಥವ ಮತದಲ್ಲಿ ಆ ಸ್ಥಾನಕ್ಕೆ ಸೇರಿಕೊಂಡ ಮಹಾತ್ಮರು ಎಷ್ಟು ಜನರಿದ್ದಾರೋ ಹೇಳಬಲ್ಲಿರಾ?**

**ಉತ್ತರ :–** ನಾನು ಹಿಂದೂವೇ. ಹಿಂದೂಮತದಲ್ಲಿ ಯಾರು ಆತ್ಮಸಾಕ್ಷಾತ್ಕಾರವನ್ನು ಹೊಂದಿ ಪರಮ ಪದವನ್ನು ಸೇರಿಕೊಂಡಿದ್ದಾರೊ ಹೇಳಬಲ್ಲಿರಾ? ಬಹಳಷ್ಟು ಇದ್ದಾರೆಂದು ಹೇಳಿದ್ದೀರ. ಕನಿಷ್ಟ ಮೂವರನ್ನು ಹೇಳಿರಿ. ಇಲ್ಲದಿದ್ದರೆ

ಇಬ್ಬರನ್ನಾದರೂ ಹೇಳಬಲ್ಲಿರಾ! ಎಂದು ನಾವು ಕೇಳುತ್ತಿದ್ದೇವೆ. ಇಲ್ಲಿಯವರೆಗು ಆತ್ಮೆಂದರೇ ಏನೋ. ಹೇಗಿರುತ್ತದೊ ಯಾರಿಗೂ ತಿಳಿದಿಲ್ಲ. ಆತ್ಮವೇ ತಿಳಿಯದಿರುವುದು ಆತ್ಮಸಾಕ್ಷಾತ್ಕಾರ ಎನ್ನುವುದೇ ಇರುವುದಿಲ್ಲ. ಮೋಕ್ಷ ಎನ್ನುವುದು ಸುಲಭವಾದುದು ಅಲ್ಲ. ದ್ವಾಪರಯುಗ ಕೊನೆಯಲ್ಲಿ ಭೀಷ್ಮನು, ಕಲಿಯುಗದಲ್ಲಿ ಸುಮಾರು 350 ವರ್ಷಗಳಿರುವಾಗ ವೇಮನಯೋಗಿಯವರು ಮುಕ್ತಿಯನ್ನು ಹೊಂದಿದಂತೆ ನಮಗೆ ತಿಳಿಯುತ್ತಿದೆ. ಅಷ್ಟೇ ಹೊರತು ಯಾರೂ ಮುಕ್ತಿಗೆ ಹೋಗಲಿಲ್ಲ. ಉಳಿದವರು ಹೋಗಲಿಲ್ಲವೆಂದು ನಿಮಗೇಗೆ ತಿಳಿದಿದೆ? ಎಂದು ಪ್ರಶ್ನಿಸಿದರೇ ಅದಕ್ಕೆ ನಮ್ಮ ಹತ್ತಿರ ಉತ್ತರವಿದೆ. ಅದೇನೆಂದರೇ! ಯಾವ ಮನುಷ್ಯನಾಗಲಿ ಮುಕ್ತಿ ಹೊಂದುವುದಕ್ಕೆ ಕಾಲ ಕೂಡಿ ಬರಬೇಕಾಗಿರುತ್ತದೆ. ಕೂಡಿ ಎಂದರೇ ನಾಲ್ಕು ಕಾಲಗಳು ಕೂಡಿ ಬರಬೇಕಾಗಿದೆ. ಒಂದು ಹಗಲು, ಎರಡು ಶುಕ್ಲ ಪಕ್ಷಮಿ, ಮೂರು ಉತ್ತರಾಯಣ. ಈ ಮೂರು ಕಾಲಗಳು ಕೂಡಿ ಬಂದರೂ ಕೊನೆಯಲ್ಲಿ ಸೂರ್ಯರಶ್ಮಿ ಕೂಡಾ ಇರಬೇಕು. ಇವೆಲ್ಲ ಕೂಡಿಬಂದಾಗ ಅದೂ ಯೋಗಿಯಾದವನಿಗೆ ಮಾತ್ರ ಮೋಕ್ಷ ಹೊಂದುವ ಅರ್ಹತೆ ಇರುತ್ತದೆ. ಈ ಮಧ್ಯಕಾಲದಲ್ಲಿ ಮರಣಿಸಿದ ಎಷ್ಟು ದೊಡ್ಡ ಸ್ವಾಮೀಜಿಗಳಾದರೂ ಅವರಿಗೆ ಕಾಲ ಕೂಡಿ ಬರಲಿಲ್ಲ. ಒಂದು ಎರಡು ಕೂಡಿ ಬರದಿರುವುದರಿಂದ ಅವರು ಮೋಕ್ಷವನ್ನು ಹೊಂದಲಿಲ್ಲ. ಮರಣಿಸಿದ ಮಹಾತ್ಮರ, ಸ್ವಾಮೀಜಿಗಳ ಮರಣ ಸಮಯವನ್ನು ನೋಡಿದರೆ ಯಾವುದೊ ಒಂದು ಇಲ್ಲವೇ ಎರಡು ತಪ್ಪಿಹೋಗುವುದರಿಂದ ಎರಡುಸಾವಿರ ವರ್ಷಗಳಿಂದ ಹಿಂದೂಗಳಲ್ಲಿ ಒಬ್ಬರಿಬ್ಬರು ಹೊರತು ಯಾರೂ ಮೋಕ್ಷವನ್ನು ಹೊಂದಲಿಲ್ಲ. ಕ್ರೈಸ್ಥರಲ್ಲಿ ಅದೂ ಇಲ್ಲ. ಅಸಲು ವಿಷಯ ಹೀಗೆ ಇರುವಾಗ ನೀವು ಬಹಳಷ್ಟು ಜನರು ಮುಕ್ತಿ ಹೊಂದಿದ್ದಾರೆ ಎನ್ನುವುದು ಪೂರ್ತಿ ಅಸತ್ಯ.

**ಪ್ರಶ್ನೆ :– ಲೌಕಿಕ ವ್ಯವಸ್ಥೆ ಎಂದರೇ ಎಲ್ಲಾ ಮತಗಳನ್ನು ಗೌರವಿಸೆನ್ನುವುದು ಎನ್ನುವುದು ನಿಮಗೆ ತಿಳಿದಿಲ್ಲವಾ? ತಿಳಿದರೆ ಏಕೆ ಇತರೆ ಮತಗಳನ್ನು ದೂಷಿಸುತ್ತಿದ್ದೀರಾ?**

**ಉತ್ತರ :–** ಈ ಮಾತು ಅವರೇ ನಿಮ್ಮನ್ನು ಕೇಳಿದರೇ ನೀವೇನು ಹೇಳುತ್ತೀರಾ? ಅನಗತ್ಯವಾಗಿ ಅವರನ್ನು ಪ್ರಸ್ತಾಪಿಸಿ ಅಗೌರವವಾಗಿ ಮಾತನಾಡಿರುವುದು ನೀವೆ ಅಲ್ಲವೇ! ನೀವು ಅವರನ್ನೇ ಅನ್ನುತ್ತಾ ಅವರಿಗೇ ಲೌಕಿಕವನ್ನು ಕಲಿಸಿದರೇ ಸರಿಹೋಗುತ್ತದಾ. ಇತರರನ್ನು ಗೌರವಿಸುವುದು ಮುಂಚೆ ನಾವೇ ಕಲಿತು ಕೊಳ್ಳೋಣ.

**ಪ್ರಶ್ನೆ :– ರಾಮನು ಸೇತುವೆಯನ್ನು ಕಟ್ಟುವುದಕ್ಕೆ ಕೋತಿಗಳನ್ನು, ಅಳಿಲನ್ನು ಬಳಸಿಕೊಂಡಿದ್ದಾನೆ. ದೇವರಾದರೇ ಏಕೆ ಬಳಸಿಕೊಂಡಿದ್ದಾನೆ? ತಾನೇ ಕಟ್ಟುಕೊಳ್ಳ ಲಾರದೆ ಹೋಗಿದ್ದಾನಾ? ಎಂದು ಪ್ರಶ್ನಿಸುತ್ತಾರೆ. ಮತ್ತು ಕ್ರಿಸ್ತುನನ್ನು ಶಿಲುಬೆಗೆ ಹಾಕುವಾಗ ಏಕೆ ತನ್ನನ್ನು ತಾನು ರಕ್ಷಿಸಿಕೊಳ್ಳಲಾರದೆ ಹೋಗಿದ್ದಾನೆ? ಅಂತಹವನು ಇತರರನ್ನು ಹೇಗೆ ರಕ್ಷಿಸುತ್ತಾನೆ.?**

**ಉತ್ತರ :–** ರಾಮನನ್ನು ಕುರಿತು ಯಾರೂ ಕೇಳಲಿಲ್ಲ ಆದರೇ, ನೀವೆ ಹೇಳಿ ರಾಮನನ್ನು ಹೊರಗೆ ತಂದಿದ್ದೀರಾ. ಯೇಸುನನ್ನು ಸಿಲುಬೆ ಹಾಕಿದ್ದಾರೆ ನಿಜವೇ. ಆದರೇ ಯೇಸು ಯಾವಾಗಾದರೂ ನಾನು ದೇವರೆಂದಾಗಲಿ, ನಾನು ರಕ್ಷಿಸುತ್ತೇನೆಂದಾಗಲಿ ಯಾರೊಂದಿಗಾದರೂ ಹೇಳಿದ್ದಾನಾ? ಯಾರೊಂದಿಗೂ ಹೇಳಲಿಲ್ಲ. ಹಾಗಿರುವಾಗ ಆತನು ಇತರರನ್ನು ಹೇಗೆ ರಕ್ಷಿಸುತ್ತಾನೆಂದು ನೀವು ಹೇಗೆ ಕೇಳುತ್ತಿದ್ದೀರಾ? ಆತನು ತಾನು ಯಾರನ್ನು ರಕ್ಷಿಸುತ್ತೇನೆಂದು ಯಾವ ಸಂದರ್ಭದಲ್ಲಿಯೂ ಹೇಳಲಿಲ್ಲ. ಒಂದುಸಮಯದಲ್ಲಿ ದ್ರಾಕ್ಷರಸವನ್ನು ತನ್ನ ಶಿಷ್ಯರಿಗೆ ಕೊಟ್ಟು **"ಇದು ನನ್ನ ಒಡಂಬಡಿಕೆಯ ರಕ್ತ ಇದನ್ನು ಕುಡಿಯಿರಿ. ಇದನ್ನು ಕುಡಿದರೆ ನನ್ನ ನಿಬಂಧನ ರಕ್ತದಿಂದ ನಿಮಗೆ ಪಾಪ ಕ್ಷಾಮಾಪಣೆ ಉಂಟಾಗುತ್ತದೆ."** ಎಂದು ಹೇಳಿದ್ದಾನೆ. ಆಗ ಆತನು ಉದಾಹರಣೆಗೆ ದ್ರಾಕ್ಷಿರಸವನ್ನು ತೋರಿಸಿ ಅದನ್ನು ತನ್ನ 'ನಿಬಂಧನ ರಕ್ತ' ಎಂದು ಹೇಳಿದ್ದಾನೆ. ನಿಬಂಧನ ರಕ್ತ ಎಂದರೇ ಏನೊ ಇಲ್ಲಿಯವರೆಗು ಕ್ರೈಸ್ಥರಿಗೆ ಯಾರಿಗೂ ತಿಳಿದಿಲ್ಲವೆಂದು ಹೇಳುತ್ತಿದ್ದೇವೆ. ನಮಗೆ ಯೇಸುವಿನಿಂದ ಪಾಪಕ್ಷಮಾಪಣೆ ನಡೆಯುತ್ತದೆಂದು ಅವರು ಹೇಳಿಕೊಳ್ಳುವುದಿದೆ ಆದರೇ ಪಾಪಕ್ಷಮಾಪಣೆ ಹೇಗೆ ನಡೆಯುತ್ತದೊ ಅವರಿಗೇ

ತಿಳಿದಿಲ್ಲ. ಯೇಸು ತಮ್ಮ ಪಾಪಗಳನ್ನು ಕ್ಷಮಿಸುತ್ತಾನೆಂದು ಕ್ರೈಸ್ಥರು ಹೇಳುತ್ತಿದ್ದಾರೆ. ಆದರೇ ಯೇಸು ಆ ಮಾತು ಯಾರೊಂದಿಗು ಹೇಳಲಿಲ್ಲ. ತನ್ನ ನಿಬಂಧನ ರಕ್ತದಿಂದ ಪಾಪ ಕ್ಷಮಾಪಣೆ ನಡೆಯುತ್ತದೆನ್ನುವುದು ವಾಸ್ತವವೇ. ಆದರೇ ನಿಬಂಧನ ರಕ್ತ ಏನೊ. ಅದು ಎಲ್ಲಿ ದೊರೆಯುತ್ತದೊ ಯಾರಿಗೂ ತಿಳಿಯದಿರುವಾಗ, ನೀವು ಈ ಪ್ರಶ್ನೆಯನ್ನು ಕೇಳುವುದರಿಂದ ಆತನ ಮಾತು ನಿಮಗೂ ಕೂಡಾ ಅರ್ಥವಾಗಲಿಲ್ಲವೆಂದು ತಿಳಿಯುತ್ತಿದೆ. ಆ ದಿನ ಆ ಮಾತನ್ನು ಕ್ರೈಸ್ಥರಿಗೆ ಒಬ್ಬರಿಗೇ ಹೇಳಲಿಲ್ಲ. ಅದು ಸರ್ವಮಾನವರಿಗು ಹೇಳಿದ್ದಾನೆ. ಆ ಮಾತನ್ನು ಯಾರಾದರೂ ಯಾವ ಮತಸ್ಥರಾದರೂ ಅರ್ಥ ಮಾಡಿಕೊಳ್ಳಬಹುದು. ಯೇಸು ಇರುವ ದಿನಗಳಲ್ಲಿ ಭೂಮಿಮೇಲೆ ಮತಗಳು ಇಲ್ಲವೆಂದು ಮರೆಯಬಾರದು. ಆತನು ಬಂದುಹೋದ ನಂತರ ಕೆಲವು ವರ್ಷಗಳಿಗೆ ಮತ ತಯಾರಾಗಿದೆ. ಆತನು ಮತಗಳು ಇಲ್ಲದಿರುವಾಗ ಸರ್ವಮಾನವರಿಗು ಹೇಳಿದ ಮಾತು. ಅದು ಕ್ರೈಸ್ಥರಿಗೆ ಸಂಬಂಧವಿಲ್ಲದ ಮಾತು. ಆ ದಿನ ಯೇಸು ಕ್ರೈಸ್ಥವನು ಕೂಡಾ ಅಲ್ಲ. ಆಚಾರಿ ಕುಲದಲ್ಲಿ ಹುಟ್ಟಿ, ಬಡಿಗೆ ಕೆಲಸ ಮಾಡಿಕೊಂಡು ಬದುಕುತ್ತಿದ್ದನು. ಬ್ರಹ್ಮಯ್ಯನವರು ಮನೆ ಬಿಟ್ಟು ದೇಶದ ಮೇಲೆ ಬಂದಂತೆ ಆತನು ಕೂಡ 30 ನೇ ವರ್ಷ ಪ್ರಾರಂಭದಲ್ಲಿಯೇ ಮನೆಬಿಟ್ಟು ಬಂದಿದ್ದಾನೆ.

ಈ ದಿನ ಕ್ರೈಸ್ಥರು ತಮ್ಮದು ಪ್ರತ್ಯೇಕವಾದ ಮತವೆಂದು ಹೇಳಿಕೊಳ್ಳುತ್ತಿದ್ದಾರೆ. ಕೆಲವರು ಹಿಂದೂ ದೇವರುಗಳಿಗೆ ವಿರುದ್ಧವಾಗಿ ಮಾತನಾಡುವುದು ನಾನು ಕೂಡಾ ನೋಡಿದ್ದೇನೆ. ಅವರು ಮಾತನಾಡುತ್ತಿದ್ದಾ ರೆಂದು ನಾವು ಕೂಡಾ ಮಾತನಾಡುವುದು ಒಳ್ಳೆಯದಾ? ಹಾಗೆ ಮಾತನಾಡಿದರೇ ಕತ್ತೆ ಕುದುರೆ ಎರಡೂ ಒಂದೇ ಆದಂತೆ ಅಲ್ಲವೇ! ಆದ್ದರಿಂದ ನಾವು ಗೌರವದಿಂದ ಇರೋಣ. ಚಿಲ್ಲರೆಯಾಗಿ ಯಾರನ್ನು ಪ್ರಶ್ನಿಸದೆ ನಮ್ಮ ಜ್ಞಾನವನ್ನು ನಾವು ತಿಳಿದುಕೊಳ್ಳೋಣ.

**ಪ್ರಶ್ನೆ:– ಯೇಸುಕ್ರಿಸ್ತು ಪ್ರಜೆಗಳನ್ನು ಉದ್ಧರಿಸುವುದಕ್ಕೆ ತನ್ನ ರಕ್ತವನ್ನು ಚಿಮ್ಮಿಸಿದ್ದಾನೆಂದು ಕ್ರೈಸ್ಥರನ್ನುತ್ತಾರೆ. ತನ್ನನ್ನು ತಾನು ಕಾಪಾಡಿಕೊಳ್ಳಲಾರದವನು ಇತರರನ್ನು ಹೇಗೆ ಕಾಪಾಡುತ್ತಾನೆ?**

**ಉತ್ತರ :–** ಕ್ರೈಸ್ಥರು ಎನ್ನುವುದನ್ನು ಪಕ್ಕಕ್ಕಿಟ್ಟು. ಯೇಸು ತನ್ನ ಮಾತುಗಳಲ್ಲಿ ಸ್ವತಃವಾಗಿ ತನ್ನ ಶಿಷ್ಯರಿಗೆ ದ್ರಾಕ್ಷರಸವನ್ನು ಕೊಟ್ಟು **"ಇದು ಚಿಮ್ಮಿಸಲ್ಪಡುತ್ತಿರುವ ನನ್ನ ರಕ್ತ. ಇದನ್ನು ಕುಡಿಯಿರಿ. ನನ್ನ ನಿಬಂಧನ ರಕ್ತದಿಂದ ನಿಮ್ಮ ಪಾಪಗಳು ಕ್ಷಮಿಸಲ್ಪಡುತ್ತವೆ.** ಎಂದು ಹೇಳಿದ್ದಾನೆ. ಈ ಮಾತು ಅಕ್ಷರಸಃ ಭಗವದ್ಗೀತೆಯಲ್ಲಿ ಇದೆ. ಹಾಗೆ ಖುರ್‌ಆನ್ ಗ್ರಂಥದಲ್ಲಿ ಇದೆ. ಹಿಂದೂಗಳಿಗೆ ಭಗವದ್ಗೀತೆ ಸರಿಯಾಗಿ ತಿಳಿಯದಿರುವಾಗ, ಭಗವದ್ಗೀತೆಯಲ್ಲಿ ಕ್ರಿಸ್ತು ಹೇಳಿದ ಮಾತು ಇದೆಯೆಂದರೇ ವಿಡ್ಡೂರವಾಗಿರುತ್ತದೆ. ಹೌದು, ನನ್ನ ಮಾತು ವಿಡ್ಡೂರವಾಗಿಯೇ ಇರುತ್ತದೆ. ಅಷ್ಟು ಮಾತ್ರಕ್ಕೆ ನನ್ನ ಮಾತನ್ನು ಅಸತ್ಯ ಎಂದು ಅಂದುಕೊಳ್ಳಬೇಡಿ. ನಾನು ಹೇಳಿದಮಾತು ನೂರಕ್ಕೆ ನೂರುಪಾಲು ಸತ್ಯ. ಈ ದಿನ ಕ್ರೈಸ್ಥರು ಕೂಡಾ ಅದೇ ಮಾತನ್ನು ಹೇಳುತ್ತಿದ್ದಾರೆ. ಯೇಸು ಚಿಮ್ಮಿಸುವ ರಕ್ತದಿಂದ ಪಾಪ ಕ್ಷಮಾಪಣೆ ಇದೆಯೆಂದು, ಆದ್ದರಿಂದ ಪ್ರಜೆಗಳೆಲ್ಲರೂ ಯೇಸುನನ್ನು ವಿಶ್ವಾಸಿಸಿ ಕ್ರೈಸ್ಥರಾಗಿ ಬದಲಾದರೆ ಅವರ ಪಾಪ ಯೇಸು ರಕ್ತದಿಂದ ತೊಳೆದುಹಾಕಲ್ಪಡುತ್ತದೆ ಎಂದು ಹೇಳತ್ತಿದ್ದಾರೆ. ವಾಸ್ತವವಾಗಿ ಹೇಳಿದರೆ ಯೇಸು ತನ್ನ ರಕ್ತದಿಂದ ಮನುಷ್ಯರ ಪಾಪ ಹೋಗುತ್ತದೆಂದು ಹೇಳಿದಮಾತು ನಿಜವೇ. ಅಷ್ಟೇ ಹೊರತು ತನ್ನ ರಕ್ತದಿಂದ ಪಾಪ ತೊಳೆದುಹಾಕಲ್ಪಡುತ್ತದೆಂದು ಹೇಳಲಿಲ್ಲ. ತನ್ನ ರಕ್ತವನ್ನು ಕುಡಿಯಿರೆಂದಿದ್ದಾನೆ, ಪಾಪಗಳನ್ನು ತೊಳೆದುಕೊಳ್ಳಿರೆಂದಿಲ್ಲ. ಕ್ರೈಸ್ಥರಿಗೆ ಬೈಬಲ್ ಗ್ರಂಥದಲ್ಲಿನ ಯೇಸು ಮಾತುಗಳು ಸ್ವಲ್ಪವೂ ಅರ್ಥವಾಗಲಿಲ್ಲ. "ಯೇಸು ತನ್ನ ರಕ್ತವನ್ನು ಸಿಲುಬೆಮೇಲೆ ಪಾಪಿಗಳಿಗಾಗಿ ಸೋರಿಸಿದ್ದಾನೆ" ಎಂದು ಹೇಳುತ್ತಿದ್ದಾರೆ. ಇದನ್ನನುಸರಿಸಿ ಪ್ರಜೆಗಳಿಗಾಗಿ ಯೇಸು ಮರಣಿಸಿದಂತೆ ಹೇಳುತ್ತಿದ್ದಾರೆ. ಆತನು ಆ ವಿಧವಾಗಿ ಪ್ರಜೆಗಳಿಗಾಗಿ ಮರಣಿಸಲಿಲ್ಲ. ಮನುಷ್ಯರೇ ಆ ದಿನ ಬಲವಂತವಾಗಿ ಆತನನ್ನು ಸಾಯಿಸಿದ್ದಾರೆ. ಆತನನ್ನು ಸಾಯಿಸಿದ ಮನುಷ್ಯರೇ ಈ ದಿನ "ಆತನು ಪ್ರಜೆಗಳಿಗಾಗಿ ಮರಣಿಸಿದ್ದಾನೆ" ಎಂದು ಹೇಳುತ್ತಿದ್ದಾರೆ. ಆತನು ಮರಣಿಸದ ಮುನ್ನ ಪ್ರಜೆಗಳಿಗಾಗಿ ಮರಣಿಸುತ್ತೇನೆಂದು ಎಲ್ಲಿಯಾದರೂ ಹೇಳಿದ್ದಾನಾ? ಹೇಳಲಿಲ್ಲ. ಹೇಳಿದಾಗ ಆತನು ಪ್ರಜೆಗಳಿಗಾಗಿ ಮರಣಿಸಿದ್ದಾನೆಂದು ಏಕೆ ಹೇಳುತ್ತಿದ್ದಾರೆ? ಆತನ ಸಾವಿಗು ಮನುಷ್ಯರ ಪಾಪಗಳಿಗು ಏನು ಸಂಬಂಧ?

ಯೇಸು ತನ್ನ ಮಾತುಗಳಲ್ಲಿ ಸ್ಪಷ್ಟವಾಗಿ ಬಟ್ಟಲಿಂದ ದ್ರಾಕ್ಷರಸವನ್ನು ಕೊಟ್ಟು ಹೀಗೆ ಹೇಳಿದ್ದಾನೆ. **"ಇದು ನನ್ನ ಚಿಮ್ಮಿಸಲ್ಪಡುತ್ತಿರುವ ರಕ್ತ"** ಎಂದಿದ್ದಾನೆ. ಆ ಮಾತಿನಲ್ಲಿನ ಅರ್ಥ 'ಪ್ರಸ್ತುತ ಹೊರಗೆ ಬರುತ್ತಿರುವ ರಕ್ತ' ಎಂದಲ್ಲವೇ ಅರ್ಥ. ಆತನು ನಡೆಯುತ್ತಿರುವ ಕಾಲವನ್ನು ಕುರಿತು ಹೇಳಿದ್ದಾನಾ, ಮುಂಬರುವಂತಹ ಕಾಲವನ್ನು ಕುರಿತು ಹೇಳಿದ್ದಾನಾ? ಈ ವಿಷಯವನ್ನು ಆಕಡೆ ಕ್ರೈಸ್ಥರಾಗಲಿ, ಈಕಡೆ ಹಿಂದೂಗಳಾಗಲಿ ಸ್ವಲ್ಪವೂ ಆಲೋಚಿಸಲಿಲ್ಲ. ಇಬ್ಬರು ಕುರುಡರಂತೆ ಮಾತನಾಡುತ್ತಿದ್ದಾರೆ. ಯೇಸು ಮರಣಿಸಿದ ನಂತರ ಆತನ ಶರೀರವೇ ಇಲ್ಲ. ಈಗ ರಕ್ತ ಹೇಗೆ ಬರುತ್ತದೆ? ಯೇಸು ರಕ್ತದಿಂದ ಪಾಪ ಹೋಗುತ್ತದೆ ಎಂದು ಹೇಳುವುದಕ್ಕೆ ಆತನ ರಕ್ತವನ್ನು ಟನ್ನುಗಳಗಟ್ಟಲೇ ಡ್ರಮ್ಮುಗಳಲ್ಲಿ ತುಂಬಿಸಿಟ್ಟಿದ್ದಾರಾ? ಹಾಗೆ ಕೂಡಾ ನಡೆಯಲಿಲ್ಲ ಅಲ್ಲವೆ! ಹಾಗಿರುವಾಗ ಆತನ ರಕ್ತದ ವಿಷಯ ಪ್ರಸ್ತಾಪಿಸುವುದು ಕ್ರೈಸ್ಥರ ತಪ್ಪು. ಅದನ್ನೇ ನಿಜವೆಂದುಕೊಳ್ಳುವುದು ಹಿಂದೂಗಳದ್ದು ತಪ್ಪು.

ಯೇಸು ಹೇಳಿದ ದಿನ **"ಚಿಮ್ಮಿಸಲ್ಪಡುತ್ತಿರುವ ರಕ್ತ"** ಎಂದು ಹೇಳಿದಾಗ ಆತನು ಹೇಳಿರುವುದು ನಿಗೂಢವಾದ ವಿಷಯವೆಂದು ಕ್ರೈಸ್ಥರು ಅರ್ಥ ಮಾಡಿಕೊಳ್ಳಲಿಲ್ಲ. ನಿಬಂಧನ ರಕ್ತ ಎಂದು ಹೇಳಿದಾಗ ದ್ರಾಕ್ಷರಸವನ್ನು ತೋರಿಸಿ ರಕ್ತವೆಂದು ಏಕೆ ಹೇಳುತ್ತಿದ್ದಾರೆಂದು ಯಾರೂ ಗ್ರಹಿಸಲಿಲ್ಲ. ಆ ದಿನ ಆತನು ಹೇಳಿರುವುದು ನಿಗೂಢವಾದ ಜ್ಞಾನವೆಂದು ತಿಳಿಯಲಾರದೆ ಹೋಗಿದ್ದಾರೆ. ಆಗ ಆತನು ಹೇಳಿದ ಮಾತಿನ ಪ್ರಕಾರ ಈ ದಿನ ಕೂಡಾ ಆತನ ಶರೀರವಿದೆ. ಆತನ ರಕ್ತ ಚಿಮ್ಮಿಸಲ್ಪಡುತ್ತಿದೆ. ಈ ನನ್ನ ಮಾತು ಕೇಳಿದರೆ ಎಲ್ಲಾ ಮತದವರಿಗು ಮತಿ ಇಲ್ಲದಂತೆ ಹೋಗುತ್ತದೆ. ನಿಮಗೆ ಏನಾದರೂ ಫರವಾಗಿಲ್ಲ ಆದರೇ, ಆತನು ಹೇಳಿದ ಮಾತು ಪೂರ್ತಿ ಸತ್ಯ. ವಾಸ್ತವವಾಗಿ ಈ ದಿನ ಕೂಡಾ ಆತನ ರಕ್ತ ಚಿಂದಿಸಲ್ಪಡುತ್ತಿದೆ. ಅದೇನೊ ತಿಳಿದರೆ ಯಾರಾದರೂ ಆ ರಕ್ತವನ್ನು ಗ್ರಹಿಸಲ್ಪಟ್ಟರೆ. ಅಂದರೇ ರಕ್ತವನ್ನು ನಿನ್ನ ಶರೀರದಲ್ಲಿ ತುಂಬಿಕೊಂಡರೆ, ಆ ರಕ್ತದಿಂದ ನಿನ್ನ ಶರೀರದಲ್ಲಿರುವ ಪಾಪಗಳೆಲ್ಲವೂ ಸುಟ್ಟುಹೋಗುತ್ತಿವೆ. ಅದನ್ನೇ

'ಕ್ಷಮಿಸಲ್ಪಡುತ್ತದೆ' ಎಂದಿದ್ದಾರೆ. ಇದೇ ಭಾವವನ್ನುಂಟುಮಾಡುವ ಮಾತು ಭಗವದ್ಗೀತೆಯಲ್ಲಿ, ಬೈಬಲ್‌ನಲ್ಲಿ ಇದೆ. ಆದರೂ ಅವು ಅರ್ಥವಾಗದೆ ಹೋಗಿವೆ. ಯೇಸು ರಕ್ತ ಯಾವುದೊ ಯಾವ ಕ್ರೈಸ್ಥನಿಗಾದರೂ ತಿಳಿದಿದೆಯಾ? ಆತನ ಶರೀರ ಯಾವುದೊ ಯಾರಿಗಾದರೂ ತಿಳಿದಿದೆಯಾ? ಎಂದು ಕೇಳುತ್ತಿದ್ದೇನೆ. ಇವೆಲ್ಲವುಗಳಿಗು ಉತ್ತರ ಇಲ್ಲದೆಯೇ ಕುರುಡರಂತೆ ಕ್ರೈಸ್ಥರು ಮಾತನಾಡುತ್ತಿದ್ದಾರೆ. ಜ್ಞಾನದಿಂದಲೇ ಅವರ ಮಾತುಗಳನ್ನು ಈಗ ನಾನು ಖಂಡಿಸಿದಂತೆ ಹಿಂದೂಗಳು ಖಂಡಿಸಬಹುದು ಅಲ್ಲವೇ! ಹಾಗಲ್ಲದೆ "ಸಿಲುಬೆ ಹಾಕುವಾಗ ತನ್ನನ್ನು ತಾನು ಕಾಪಾಡಿಕೊಳ್ಳದವನು ಇತರರನ್ನು ಹೇಗೆ ರಕ್ಷಿಸುತ್ತಾನೆ?" ಎಂದಿದ್ದಾರೆ. ಆತನು ತನ್ನ ಮಾತುಗಳಲ್ಲಿ ಯಾರನ್ನು ತಾನು ರಕ್ಷಿಸುತ್ತೇನೆಂದು ಹೇಳಲಿಲ್ಲ. ತನ್ನ ರಕ್ತ ರಕ್ಷಿಸುತ್ತದೆ ಎಂದು ಮಾತ್ರ ಹೇಳಿದ್ದಾನೆಂದು ತಿಳಿಯಬೇಕು. ಇದು ಬೈಬಲ್‌ನಲ್ಲಿ ಯೇಸು ಹೇಳಿದ ವಿಷಯವಾಗಿದ್ದು! ಭಗವದ್ಗೀತೆಯಲ್ಲಿ ಈ ವಿಷಯ ಎಲ್ಲಿ ಹೇಳಿದ್ದಾನೆಂದು ಕೆಲವರು ಕೇಳಬಹುದು. ಹಾಗೆಯೇ ಖುರ್‌ಆನ್‌ನಲ್ಲಿ ಎಲ್ಲಿ ಹೇಳಿದ್ದಾನೆಂದು ಕೂಡಾ ಮುಸ್ಲಿಮ್‌ರು ಕೇಳಬಹುದು. ನಾನು ಮೂರು ಗ್ರಂಥಗಳನ್ನು ಓದಿದ್ದೇನೆ. ಮೂರು ದೈವ ಗ್ರಂಥಗಳಲ್ಲಿ ಒಂದೇ ದೈವಜ್ಞಾನ ಇದೆಯೆಂದು, ಮೂರು ಗ್ರಂಥಗಳು ಒಂದೇ ದೇವರನ್ನೇ ಬೋಧಿಸುತ್ತಿವೆಯೆಂದು ನನಗೆ ತಿಳಿದಿದೆ. ನಿಮಗೆ ಏಕೆ ತಿಳಿಯಲಿಲ್ಲ?

**ಪ್ರಶ್ನೆ :– ವೇದಗಳು ಒಬ್ಬರು ಬರೆದಿರುವವಲ್ಲ. ಭಗವಂತನ ಮುಖದಿಂದ ಬಂದಿರುವವು, ವೇದಗಳಿಗು ಪುರಾಣಗಳಿಗು ವಕ್ರಭಾಷ್ಯ ಹೇಳಿ ಅತಿ ತಿಳುವಳಿಕೆ ಪ್ರದರ್ಶಿಸಬೇಡಿ. ಅದು ನಿಮಗೇ ನಷ್ಟ!**

**ಉತ್ತರ :–** ಕ್ರೈಸ್ಥರು ವೇದಗಳಿಗೆ ವಕ್ರಭಾಷ್ಯ ಹೇಳುವಷ್ಟು ಸಾಮರ್ಥ್ಯವಿಲ್ಲ. ಸಂಸ್ಕೃತ ಬಂದವರಿಗೆ ವೇದಗಳಿಗೆ ಭಾಷ್ಯವನ್ನು ಹೇಳುವ ಸಾಮರ್ಥ್ಯ ಇರುತ್ತದೆ. ಕ್ರೈಸ್ಥರಿಗೆ ಸಂಸ್ಕೃತ ಭಾಷೆಯೇ ಬರುವುದಿಲ್ಲ. ಅಂತಹದರಲ್ಲಿ ಸಮಯದಲ್ಲಿ ಅದನ್ನು ಇದು ಅದು ಎಂದು ಯಾವುದು ಹೇಳಲಾರರು. ವಕ್ರಭಾಷ್ಯವನ್ನು ಹಿಂದೂಗಳಲ್ಲಿಯೇ ಹಿಂದೂಮತದ ಮೇಲೆ ಅಧಿಪತ್ಯವನ್ನು ಚಲಾಯಿಸುವವರು

ಹೇಳುತ್ತಿರುತ್ತಾರೆ. ಅಷ್ಟೇತಕ್ಕೆ ಈಗ ಈ ಪ್ರಶ್ನೆಯಲ್ಲಿ ಕೂಡಾ ತಪ್ಪು ಮಾತುಗಳನ್ನು ಹೇಳಿ ದಾರಿ ತಪ್ಪಿಸಬೇಕೆಂದು ನೋಡಿದಂತೆ ಕಾಣಿಸುತ್ತಿದೆ. ನಾನು ಹಿಂದೂವೇ, ಆದ್ದರಿಂದ ಹಿಂದೂತ್ವಕ್ಕೆ ಎಲ್ಲಿ ನಷ್ಟವು ಸಂಭವಿಸುತ್ತದೋ ಅಲ್ಲಿ ನಾನು ಜೋಕ್ಯಮಾಡಿಕೊಂಡು ಹಿಂದೂತ್ವವನ್ನು ಕಾಪಾಡಬೇಕೆಂದು ಪ್ರಯತ್ನವನ್ನು ಮಾಡುತ್ತಿದ್ದೇನೆ. ಹಿಂದೂ ಜ್ಞಾನಕ್ಕೆ, ಹಿಂದೂ ಆಧ್ಯಾತ್ಮಿಕ ವಿದ್ಯೆಗೂ ವೇದಗಳು ಆತಂಕವೆಂದು, ಅವುಗಳಿಂದ ದೇವರು ತಿಳಿಯುವುದಿಲ್ಲವೆಂದು, ಹಿಂದೂಗಳಿಗೆ ಪ್ರಾಮಾಣಿಕ ಗ್ರಂಥವಾದ, ದೇವರು ಭಗವಂತನಾಗಿ ಬಂದು ಸ್ವತಃವಾಗಿ ಭಗವದ್ಗೀತೆಯಲ್ಲಿ ಹೇಳುವುದಾಗಿದೆ. ಅಂತಹ ವೇದಗಳನ್ನು ಭಗವಂತನ ಮುಖತ ಬಂದಿರುವವೆಂದರೇ ಭಗವಂತನನ್ನೇ ಅವಮಾನಿಸಿದಂತಾಗುತ್ತದೆ.

ಅಷ್ಟೇ ಅಲ್ಲದೆ ಅಧರ್ಮಗಳಿಗೆ ತಡೆಗೋಡೆಕಟ್ಟಿ ಧರ್ಮಗಳನ್ನು ತಿಳಿಸುವ ಭಗವದ್ಗೀತೆಯನ್ನು ಅವಮಾನಿಸಿದಂತಾಗುತ್ತದೆ. ವೇದಗಳು ಗ್ರಂಥರೂಪವಾಗಿವೆಯೆಂದು ತಿಳಿದು, ಅಲ್ಲಿಯವರೆಗು ಭಗವಂತನಾಗಿ ಬಾರದ ದೇವರು ಭಗವಂತನಾಗಿ ಬಂದು ವೇದಗಳು ಗುಣಗಳಿಂದ ಕೂಡಿಕೊಂಡಿವೆಯೆಂದು ಅವುಗಳನ್ನು ಮಾಯೆಯೆಂದು ಹೇಳಿರುವುದು ಭಗವಂತನು. ಅಂತಹ ಭಗವಂತನೇ ವೇದಗಳನ್ನು ಹೇಳಿದ್ದಾನೆಂದು ಹೇಳುವುದು ದೊಡ್ಡ ತಪ್ಪು. ಮನುಷ್ಯರು ಹೇಳಿರುವವು ವೇದಗಳು. ಸಾಧಾರಣವಾಗಿ ಆದರೆ ಒಂದು ಗ್ರಂಥಕ್ಕೆ ಒಬ್ಬ ಗ್ರಂಥಕರ್ತ ಇರುತ್ತಾನೆ. ಹಾಗೆ ಯಾವ ವೇದಕ್ಕು ಒಬ್ಬ ಗ್ರಂಥಕರ್ತ ಎನ್ನುವವನು ಇಲ್ಲ. ಕೆಲವು ನೂರಾರು ಜನರು ಅವರ ಮನೋಭಾವನೆಗಳ ಪ್ರಕಾರ ಬರೆದವುಗಳನ್ನು ಶೇಕರಿಸಿ ಒಂದು ಗ್ರಂಥವಾಗಿ ಮಾಡಿ ಅದಕ್ಕೆ ಒಂದು ವೇದವೆಂದು ಹೆಸರಿಟ್ಟಿದ್ದಾರೆ. ಹಾಗೆ ಮನುಷ್ಯರು ಬರೆದಿರುವವನ್ನು ನಾಲ್ಕು ವೇದಗಳಾಗಿ ಬರೆದವನು ವ್ಯಾಸನು. ಕೃತ, ತ್ರೈತಾ, ದ್ವಾಪರ ಯುಗಗಳಲ್ಲಿ ಅನೇಕರು ಬರೆದ ಅವರವರ ಭಾವನೆಗಳನ್ನು ವ್ಯರ್ಥವಾಗಿ ಹೋಗದಂತೆ ಒಂದುಕಡೆ ಸೇರಿಸಿ ಒಂದು ಗ್ರಂಥರೂಪ ಮಾಡಿದವನು ವ್ಯಾಸನು. ಅದರಲ್ಲಿ ಕೊನೆಯಲ್ಲಿ ಬರೆದ ವೇದ ಅಧರ್ಮಣ ವೇದ. ಕೊನೆಗದು ಅಥರ್ವಣ

ವೇದವಾಗಿ ಕೂಡಾ ಕರೆಯಲ್ಪಡುತ್ತಿದೆ. ವೇದ ಎಂದರೇ 'ಬಾಧೆ' ಎಂದು ಅರ್ಥ. ವೇದಗಳೆಂದರೇ 'ಬಾಧೆಗಳು' ಎಂದು ಅರ್ಥ. ಮನುಷ್ಯರು ಬರೆದ ವ್ಯಾಸಗಳನ್ನು ಶೇಕರಿಸಿ ನಾಲ್ಕು ಗ್ರಂಥಗಳಾಗಿ ಬರೆದವನು ವ್ಯಾಸನು.

ವೇದಗಳಿಗೆ ಒಬ್ಬ ಗ್ರಂಥಕರ್ತ ಇಲ್ಲ. ವ್ಯಾಸನು ಗ್ರಂಥವಾಗಿ ಮಾಡಿದರೂ ಅವುಗಳನ್ನು ಬರೆದವರು ಅನೇಕರು. ವೇದಗಳನ್ನು ಬರೆದವರ ಹೆಸರು ಪೂರ್ತಿ ತಿಳಿಯದಂತೆ ಹೋದರೆ ಚೆನ್ನಾಗಿರುವುದಿಲ್ಲವೆಂದು ಅವರು ಬರೆದಿರುವ ವ್ಯಾಸದಲ್ಲಿನ ಮುಖ್ಯ ಭಾಗಕ್ಕೆ ಅವರು ಬರೆದ ಹೆಸರನ್ನೇ ಇಡುವುದು ನಡೆದಿದೆ. ಯಾರು ವೇದವನ್ನು ಬರೆದಿದ್ದಾರೊ ಅವರ ಮುಖ್ಯ ಭಾಗಕ್ಕೆ ಉಪನಿಷತ್ತೆಂದು ಹೆಸರಿಡುವುದು, ಆ ಉಪನಿಷತ್ತುಗೆ ಅವರ ಹೆಸರೇ ಇಡುವುದರಿಂದ ಅದು ಇಂತಹವರೇ ಬರೆದಿದ್ದಾರೆಂದು ತಿಳಿಯುತ್ತಿದೆ. ವ್ಯಾಸಗಳನ್ನು ಬರೆದವರೇ ಕೊನೆಯಲ್ಲಿ ಅವರ ಹೆಸರನ್ನು ಬರೆದುಕೊಳ್ಳುವುದು ನಡೆದಿದೆ. ವ್ಯಾಸಗಳು ಸುಮಾರು ಲಕ್ಷದವರೆಗು ಇರುತ್ತಿದ್ದವು. ಮುಸ್ಲಿಮ್ ಪಂಡಿತರು ಹಾದೀಸುಗಳನ್ನು ಬರೆದಂತೆ ಹಿಂದೂ ಪಂಡಿತರು, ಮುನಿಗಳು, ಮಹಾರ್ಷಿಗಳು, ಮೊದಲಾದವರು ವೇದವ್ಯಾಸಗಳನ್ನು ಲಕ್ಷದವರೆಗು ಬರೆದಿದ್ದಾರೆ. ಮುಸ್ಲಿಮ್ ಪಂಡಿತರು ಹದೀಸುಗಳನ್ನು ಲಕ್ಷದವರೆಗು ಬರೆದಿಟ್ಟಾಗ ಈ ದಿನ ಅವುಗಳನ್ನು ಗ್ರಂಥ ರೂಪವಾಗಿ ಮಾಡಿದವರು ಅದರಲ್ಲಿ ಮುಖ್ಯವಾದವುಗಳನ್ನು ಸುಮಾರು ಸಾವಿರದವರೆಗು ತೆಗೆದುಕೊಂಡು ಹಾದಿಸು ಗ್ರಂಥಗಳನ್ನು ಮಾಡಿದಂತೆ, ಅದೇ ವಿಧವಾಗಿ ಲಕ್ಷವ್ಯಾಸಗಳಾಗಿ ಇರುವವುಗಳಲ್ಲಿ ಮುಖ್ಯವಾದವುಗಳನ್ನು ತೆಗೆದುಕೊಂಡು ಸುಮಾರು 1108 ರವರೆಗು ಬರೆದು ನಾಲ್ಕು ವೇದಗಳನ್ನು ಮಾಡಿದ್ದಾರೆ. ವ್ಯಾಸಗಳನ್ನು ಚಿಕ್ಕಂದಿನಿಂದ ಪರೀಶಿಲಿಸಿದ ವ್ಯಾಸನು ವ್ಯಾಸಗಳನ್ನು ಅನುಸರಿಸಿ ಅವುಗಳೇ ಶ್ರೇಷ್ಠವಾದವೆಂದು ತಿಳಿದು ಅವುಗಳ ಹೆಸರನ್ನೇ ತನ್ನ ಹೆಸರಾಗಿರಬೇಕೆಂದು ಯುಕ್ತ ವಯಸ್ಸಿನಲ್ಲಿಯೇ ತನ್ನ ಹೆಸರನ್ನು ವೇದವ್ಯಾಸನೆಂದು ಇಟ್ಟುಕೊಳ್ಳುವುದು ನಡೆದಿದೆ. ತನ್ನ ತಾಯಿ ತಂದೆಯರು ಇಟ್ಟಿರುವ ಹೆಸರನ್ನು 25 ವರ್ಷಗಳಲ್ಲಿಯೇ ಬಿಟ್ಟುಹಾಕಿದವನು, ವೇದವ್ಯಾಸಗಳಿಂದ ಪ್ರೇರೇಪಿತನಾಗಿ ತನ್ನ ಹೆಸರನ್ನು ವೇದವ್ಯಾಸನಾಗಿ ಬದಲಿಸಿಕೊಂಡಿದ್ದಾನೆ.

ಈ ದಿನ ನಾನು ಹೇಳುವ ವಿಷಯ ಎಲ್ಲರಿಗೂ ಹೊಸದಾಗಿ ಆಶ್ಚರ್ಯವಾಗಿ ಇದ್ದರೂ ಆ ದಿನ ನಡೆದ ಸತ್ಯ ಅದೇ. ಕೃತಯುಗದಿಂದ ಸ್ವಲ್ಪ ಆಧ್ಯಾತ್ಮಿಕ ಪ್ರೇರಣೆ ಹೊಂದಿದವರು ಅವರಿಗೆ ತಿಳಿದಿರುವುದು ಅವರು ಬರೆದಿಟ್ಟಿದ್ದಾರೆ. ಆ ದಿನ ತಾಳೆ ಎಲೆಗಳ ಮೇಲೆ ಬರೆದಿರುವುದು ಎಷ್ಟೋ ಕಾಲದವರೆಗಿದ್ದು. ಶಿಥಿಲಾವಸ್ಥೆಗೆ ಬಂದಾಗ, ಅವುಗಳೆಲ್ಲವುಗಳನ್ನು ಓದಿದ ವ್ಯಕ್ತಿ ಒಬ್ಬನೇ ಒಬ್ಬ ವ್ಯಾಸನು. ವ್ಯಾಸನು ಅಲ್ಲಿಯವರೆಗು ಬಿಡಿಬಿಡಿಯಾಗಿದ್ದ ಅನೇಕರ ವ್ಯಾಸಗಳನ್ನು ಒಂದಾಗಿ ಸೇರಿಸಿ ಗ್ರಂಥಗಳಾಗಿ ಬರೆಯಬೇಕೆಂದು ಕೊಂಡಿದ್ದಾನೆ. ಆದರೇ ವ್ಯಾಸನು ಎಲ್ಲರೂ ಬರೆದ ವ್ಯಾಸಗಳನ್ನು ಇರುವುದು ಇದ್ದಂತೆ ಬರೆಯಲಿಲ್ಲ. ಅದರಲ್ಲಿ ತನ್ನ ಸ್ವಾರ್ಥ ಕೆಲಸಮಾಡಿ ವ್ಯಾಸವನ್ನು ಎರಡು ಭಾಗಗಳಾಗಿ ಮಾಡಿ, ಬರೆದವರ ಹೆಸರಿರುವ ಕೊನೆಯ ಭಾಗವನ್ನು ಉಪನಿಷತ್ತೆಂದು ಹೆಸರಿಟ್ಟು ವಿಭಜಿಸಿದ್ದಾನೆ. ಮೊದಲ ಭಾಗವನ್ನು ವೇದವೆಂದು, ಕೊನೆಯಲ್ಲಿ ಬರೆದಿರುವವರ ಹೆಸರಿರುವ ಭಾಗವನ್ನು ಉಪನಿಷತ್ತೆಂದು ಹೇಳಿದ್ದಾನೆ. ಕೊನೆಯ ಭಾಗದಲ್ಲಿ ವ್ಯಾಸವನ್ನು ಬರೆದವರ ಹೆಸರಿರುವಾಗ, ಹೆಸರಿರುವ ಕೊನೆಯ ಭಾಗ ಉಪನಿಷತ್ತಾಗಿದೆ. ಆದ್ದರಿಂದ ಪ್ರತಿ ಉಪನಿಷತ್ ಯಾವುದೊ ಒಂದು ಹೆಸರಿನ ಮೇಲೆ ಇರುತ್ತದೆ. ಪ್ರತಿ ಉಪನಿಷತ್ ಒಂದು ಹೆಸರನ್ನು ಹೊಂದಿರುತ್ತದೆ. ಉಪನಿಷತ್ ಯಾವ ಹೆಸರಿನಿಂದಿರುತ್ತದೊ ಆ ಹೆಸರಿರುವ ವ್ಯಕ್ತಿ ಆ ವ್ಯಾಸವನ್ನು ಬರೆದಿದ್ದಾನೆಂದು ಅರ್ಥ. ಆದರೇ ವ್ಯಾಸವು ಎರಡು ಭಾಗಗಳಾಗಿ ವಿಭಜಿಸಲ್ಪಟ್ಟು ಇರುವುದರಿಂದ ಮೊದಲ ಭಾಗವನ್ನು ಬರೆದವರ ಹೆಸರು ತಿಳಿಯದೇ ಹೋಗಿದೆ. ಉಪನಿಷತ್‌ಗಳ ಹೆಸರುಗಳಿರುವು ದರಿಂದ ಅವುಗಳನ್ನು ಇಂತಹವರು ಬರೆದಿದ್ದಾರೆಂದು ಹೇಳಬಹುದು. ಹೀಗೆ ಸುಮಾರು 1108 ಉಪನಿಷತ್ತುಗಳು ವ್ಯಾಸನಿಂದ ಬರೆಯಲ್ಪಟ್ಟಿವೆಯೆಂದು ಹೇಳುತ್ತಿರುತ್ತಾರೆ.

ಉದಾಹರಣೆಗೆ 'ಮಂಡುಕೋಪನಿಷತ್ತ'ನ್ನು ಅದಕ್ಕಿರುವ ಹೆಸರನ್ನನುಸರಿಸಿ ಮಂಡೂಕನು ಮುನಿ ಬರೆದಿದ್ದಾನೆಂದು ಹೇಳುತ್ತಿರುತ್ತಾರೆ. ತ್ರೈತರಿಯೋಪನಿಷತ್ತನ್ನು

ತೈತ್ತರಿಯ ಮುನಿ ಬರೆದಿದ್ದಾನೆಂದು ಹೇಳುತ್ತಿರುತ್ತಾರೆ. ಕೇಶೋಪನಿಷತ್ತನ್ನು ಕೇಶವ ಎನ್ನುವ ಪಂಡಿತನು ಬರೆದಿದ್ದಾನೆಂದು ಹೇಳುತ್ತಿರುತ್ತಾರೆ. ಈ ವಿಧವಾಗಿ ಉಪನಿಷತಗಳನ್ನು ಆಯಾ ಹೆಸರುಗಳ ಮೇಲೆ ಬರೆದ ವ್ಯಾಸನು, ಅವುಗಳ ಮುಂದೆ ವ್ಯಾಸಗಳನ್ನು ತಾನೇ ಬರೆದಂತಿರಬೇಕೆಂದು, ವೇದಗಳನ್ನು ಆ ವ್ಯಾಸಗಳನ್ನು ತಾನೇ ಬರೆದಂತೆ ಎಲ್ಲರೂ ಅಂದುಕೊಳ್ಳನಬೇಕೆಂಬ ಉದ್ದೇಶದಿಂದ ವ್ಯಾಸಗಳನ್ನು ನಾಲ್ಕು ವೇದಗಳಾಗಿ ವಿಭಜಿಸಿ ನಾಲ್ಕು ಗ್ರಂಥಗಳನ್ನು ಬರೆದಿದ್ದಾನೆ. ದ್ವಾಪರಯುಗದಲ್ಲಿಯೇ ಇತರೆ ಮಹಾರ್ಷಿಗಳು ವೇದಗಳೆಂದು ಹೆಸರಿಟ್ಟು ಬರೆದ ಗ್ರಂಥಗಳು ಯಾರೂ ಬರೆದಿದ್ದಾರೆ? ಎಂದು ಪ್ರಶ್ನಿಸಿದಾಗ, ತಾನು ಬರೆದಿದ್ದೇನೆಂದರೇ ತನ್ನ ತಪ್ಪು ದೊರೆಯುತ್ತದೆಂದು ಜಾಣ್ಮೆಯಿಂದ ಬ್ರಹ್ಮಮುಖ ದಿಂದ ಬಂದಿರುವವೆಂದು ಹೇಳಿದ್ದಾನೆ. ಬ್ರಹ್ಮಮುಖದಿಂದ ಬಂದಿರುವ ಬರಹಗಳು ಶಿಥಿಲಾವಸ್ಥೆಯಲ್ಲಿ ತಾಳೆ ಎಲೆಗಳ ಮೇಲೆ ಇರುವುದರಿಂದ, ಅವುಗಳನ್ನು ಗ್ರಂಥರೂಪ ಮಾಡುತ್ತಿದ್ದೇನೆಂದು ಹೇಳಿದ್ದಾನೆ. ಆ ದಿನ ಅಂದಿನಿಂದ ಕೆಲವರು ವೇದಗಳು ಬ್ರಹ್ಮಮುಖದಿಂದ ಬಂದಿವೆಯೆಂದು, ಮನುಷ್ಯರು ಬರೆದಿರುವವು ಅಲ್ಲವೆಂದು ಹೇಳುವುದು ನಡೆದಿದೆ. ಎಲ್ಲರೂ ಅದೇ ನಿಜವೆಂದು ಅಂದುಕೊಂಡಿದ್ದಾರೆ.

ಹೇಗಾದರೇನು ವೇದಗಳೆನ್ನುವ ಹೆಸರಿನಿಂದ ಇತರರ ವ್ಯಾಸವು ಬರೆದ ಅವನ ಹೆಸರು ವೇದವ್ಯಾಸನೆಂದು ಚಿರಸ್ಥಾಯಿಯಾಗಿ ನಿಂತುಹೋಗಿದೆ. ಆದರೇ ವ್ಯಾಸನು ಚರಿತ್ರೆಯಲ್ಲಿ ವ್ಯಾಸಗಳು ಬರೆದವರೆಲ್ಲರಿಗೂ ಮೋಸ ಮಾಡಿ ತಾನು ಸ್ವತಃವಾಗಿ ಬರೆದಂತೆ ವ್ಯಾಸಗಳನ್ನು ಬರೆದು, ವ್ಯಾಸದ ಕೊನೆಯ ಭಾಗಗಳನ್ನು ಅಂದರೇ ಬರೆದ ಹೆಸರಿರುವ ಭಾಗಗಳನ್ನು ಬಾಲಗಳನ್ನು ಕತ್ತರಿಸಿದಂತೆ ಕತ್ತರಿಸಿ ಒಂದುಕಡೆ ಸೇರಿಸಿ ಉಪನಿಷತ್ತುಗಳು ಎಂದು ಕರೆದಿದ್ದಾನೆ. ವೇದಗಳಲ್ಲಿಯೇ ಉಪನಿಷತ್ತುಗಳನ್ನು ಇಟ್ಟರೂ ಬರೆದವನಿಗೆ ಸಂಬಂಧವಿಲ್ಲದೆ ವ್ಯಾಸಗಳನ್ನು ಕತ್ತರಿಸಿ ತನ್ನ ಖಾತೆಯಲ್ಲಿ ತಾನೇ ಬರೆದಂತೆ ಪ್ರಚಾರ ಮಾಡಿಕೊಂಡು, ಕೊನೆಗೆ ವೇದವ್ಯಾಸನಾಗಿ ಉಳಿದುಹೋಗಿದ್ದಾನೆ. ಇತರರ ವ್ಯಾಸಗಳನ್ನು ವೇದಗಳನ್ನಾಗಿ

ಬದಲಾಯಿಸಿ ವೇದವ್ಯಾಸನೆಂದು ಹೆಸರು ತಂದುಕೊಂಡಿದ್ದಾನೆ. ಅಲ್ಲಿಗೆ ಸುಮ್ಮನಿರದೇ ಪುರಾಣಗಳನ್ನು ಕೂಡಾ ಬರೆದಿದ್ದಾನೆ. ನಾಲ್ಕು ವೇದಗಳು ಸಾವಿರಾರೂ ಜನರು ಬರೆದಿರುವವೆಂದು ಹೇಳುವುದಕ್ಕೆ ಗುರುತಾಗಿ ಸಾವಿರ ಉಪನಿಷತ್ತುಗಳಿರುವುದೇ ಕಾರಣ. ಸಾವಿರಕ್ಕಿಂತ ಮೀರಿ ಲಕ್ಷದವರೆಗು ಇರುವ ವೇದವ್ಯಾಸಗಳಿಂದ ಕೆಲವನ್ನೇ ತೆಗೆದುಕೊಂಡು, ನಾಲ್ಕು ವೇದಗಳನ್ನು ಮಾಡಿದ ವ್ಯಾಸನು ನಂತರ ಹದಿನೆಂಟು ಪುರಾಣಗಳನ್ನು ಮಾಡಿದ್ದಾನೆ. ಆಗ ತಾನು ಬರೆದ ವೇದಗಳೇ ನಿಜವಾದ ದೈವ ಜ್ಞಾನವೆಂದು ತಿಳಿದುಕೊಂಡು ಗರ್ವ ಪಡುತ್ತಿದ್ದನು. ಪ್ರಪಂಚಕ್ಕೆಲ್ಲ ತಾನು ಬರೆದ ವೇದಗಳಿಂದಲೇ ದೈವಭಕ್ತಿ, ಆಧ್ಯಾತ್ಮಿಕತೆ ಏರ್ಪಡುತ್ತದೆಂದು ಅಂದುಕೊಂಡಿದ್ದಾನೆ. ಆದರೆ ಆತನು ಅಂದುಕೊಂಡಿರುವುದು ಆತನ ಮುಂದೆಯೇ ಕಾಣಿಸದಂತೆ ಹೋಗಿದೆ. ತಾನು ಅಂದುಕೊಂಡಿರುವುದು ತಪ್ಪೆಂದು, ತಾನು ಪೊರಪಾಟು ಬಿದ್ದಿದ್ದೇನೆಂದು ನಂತರ ತಿಳಿದುಕೊಂಡು ದಿಗಿಲುಗೊಂಡಿದ್ದಾನೆ.

ವ್ಯಾಸನು ವೇದಗಳನ್ನು ಬರೆದು, ಆಧ್ಯಾತ್ಮಿಕಕ್ಕೆ ಅವುಗಳೇ ಪ್ರಾಮಾಣಿಕ ಗ್ರಂಥಗಳೆಂದು ಹೇಳಿದಾಗ, ಅಂದಿನಿಂದ ಎಲ್ಲರೂ ಅವುಗಳನ್ನೇ ವಿಶ್ವಾಸಿಸುತ್ತಿದ್ದಾರೆ. ಅದಕ್ಕುಮುನ್ನವೇ ಹಾಡುಗಳ ರೂಪದಲ್ಲಿ, ಮಂತ್ರರೂಪದಲ್ಲಿ ಕೆಲವರ ಹತ್ತಿರವೇ ಮುಂದುವರೆಯುತ್ತಾ ಬರುತ್ತಿರುವ ವೇದಗಳು ಗ್ರಂಥರೂಪಗಳಾಗಿ ಪ್ರಜೆಗಳೆಲ್ಲರ ಹತ್ತಿರಕ್ಕೆ ಹೋಗಿವೆ. ಆಗ ಭೂಮಿಮೇಲೆ ಅಧರ್ಮಗಳು ಹೆಚ್ಚಾಗಿವೆಯೆಂದು ತಿಳಿದ ದೇವರು ಭಗವಂತನಾಗಿ ಅವತರಿಸಿ ವೇದಗಳಿಗೆ ವಿರುದ್ಧವಾಗಿ ಜ್ಞಾನವನ್ನು ಭಗವದ್ಗೀತೆ ರೂಪದಲ್ಲಿ ಹೇಳಿದ್ದಾನೆ. ಆಗ ಅದನ್ನು ತಿಳಿದ ವ್ಯಾಸನು ಪೂರ್ತಿ ಯಾಗಿ ಚಿಂತಿಸಿ, ತಾನು ಮಾಡಿದ ಕೆಲಸ ತಪ್ಪೆಂದು ತಿಳಿದು, ಅದಕ್ಕೆ ಪಶ್ಚಾತ್ತಾಪವಾಗಿ ಪಾಪ ಪರಿಹಾರವಾಗಿ ಭಗವದ್ಗೀತೆಯನ್ನು ಗ್ರಂಥರೂಪ ಮಾಡಿದ್ದಾನೆ.

ಈ ವಿಧವಾಗಿ ಎಷ್ಟೋ ನಡೆದಿರುವ ಚರಿತ್ರೆ ಇರುವಾಗ, ಅವುಗಳೆಲ್ಲವುಗ ಳನ್ನು ತಿಳಿಯದೆಯೇ ಇತರರನ್ನು ಪ್ರಶ್ನಿಸುವುದು ಒಳ್ಳೆಯದಲ್ಲ. ಈ ಪ್ರಶ್ನೆಗಳು

ಕೇಳಿದವರು ಹಿಂದೂಮತ ರಕ್ಷಕರೆಂದು ಹೇಳಿಕೊಳ್ಳುವವರು ಪ್ರಶ್ನಿಸಿರುವುದೇ ಎಂದು ತಿಳಿಯುತ್ತಿದೆ. ನಾನು ಇರುವುದಿದ್ದಂತೆ ಹೇಳುತ್ತಿದ್ದೇನೆ. ನೀವು ವಾಸ್ತವವಾಗಿ ತಮ್ಮ ಮತವನ್ನು ಉದ್ಧರಿಸಬೇಕೆಂದಾಗಲಿ, ಮತವನ್ನು ಬೆಳೆಯುವಂತೆ ಮಾಡಬೇಕೆಂದಾಗಲಿ ಅಂತರಂಗದಲ್ಲಿಲ್ಲ. ಸಮಾಜದಲ್ಲಿ ಹೆಸರುಗಳಿಸಲು ಇದೆಲ್ಲಾ ಮಾಡುತ್ತಿದ್ದಾರೆ. ಸಮಾಜದಲ್ಲಿ ಗುರುತು ಬಂದರೇ ಮತದ ಮೇಲೆ, ಮತದಲ್ಲಿನ ಮನುಷ್ಯರ ಮೇಲೆ ತಮ್ಮ ಅಧಿಕಾರವನ್ನು ಸಾಧಿಸುವುದಕ್ಕೆಂದು ನನ್ನ ಅನುಭವವನ್ನು ಹೇಳುತ್ತಿದ್ದೇನೆ. ನಿಜವಾಗಲು ಹಿಂದೂಮತವನ್ನು ರಕ್ಷಿಸುವವರಿಗಾದರೆ ಅವನಿಗೆ ಹಿಂದೂಮತ ಧರ್ಮಗಳು ತಿಳಿದಿರಬೇಕು. ಅವುಯಾವುವೊ ಅವರಿಗೆ ತಿಳಿದಿಲ್ಲ. ಕನಿಷ್ಟ ಹಿಂದೂಧರ್ಮಗಳಿಗೆ ಪ್ರಾಮಾಣಿಕ ಗ್ರಂಥವಾದ ಭಗವದ್ಗೀತೆಯನ್ನಾದರೂ ಓದಿರಬೇಕು. ಅದೂ ಓದಿರುವುದಿಲ್ಲ. ಹಿಂದೂಗಳಿಗಾಗಿ, ಹಿಂದೂಮತಕ್ಕಾಗಿ ಶ್ರಮಪಡಬೇಕೆಂದು ಕೊಳ್ಳುವವರಿಗೆ ಭಗವದ್ಗೀತೆ ತಿಳಿದಿಲ್ಲ. ಹಿಂದೂಧರ್ಮಗಳು ತಿಳಿದಿಲ್ಲ. ಅಂತಹವರು ಹಿಂದೂ ಮತಕ್ಕಾಗಿ ಶ್ರಮಪಟ್ಟಂತೆ ನಟಿಸುತ್ತಿರುತ್ತಾರೆ ಹೊರತು ನಿಜವಾಗಿ ಅವರಲ್ಲಿನ ಉದ್ದೇಶ ಅದು ಅಲ್ಲವೇ ಅಲ್ಲ ಹಿಂದೂಗಳಲ್ಲಿ ತಾವು ಹಿರಿಯರೆನ್ನುವಂತೆ ಗುರುತು ಬಂದರೆ ನಾವು ಹಿಂದೂಮತ ಹಿರಿಯರೆಂದು ಹೇಳಿಕೊಳ್ಳುತ್ತಾ ಹಿಂದೂಗಳ ಮೇಲೆ ದೊಡ್ಡಸ್ತಿಕೆಯನ್ನು ಚಲಾಯಿಸುವುದು ಹೊರತು ಇತರೆ ಏನೂ ಇಲ್ಲ.

ಯಾವ ಮತವನ್ನು ರಕ್ಷಿಸಿಕೊಳ್ಳಬೇಕೆಂದರೂ ಕನಿಷ್ಟ ಆ ಮತದ ಪ್ರಾಥಮಿಕ ಜ್ಞಾನ ಸ್ವಲ್ಪವಾದರೂ ತಿಳಿದಿರಬೇಕು. ಸಾಧಾರಣ ಜ್ಞಾನವಾಗಲಿ, ಪ್ರಾಥಮಿಕ ಜ್ಞಾನವಾಗಲಿ ತಿಳಿಯದವರು ಈ ದಿನ ಮತ ರಕ್ಷಕರಾಗಿ ಇರುವುದರಿಂದ, ಅವರು ಮತವನ್ನು ಯಾವ ವಿಧವಾಗಿ ರಕ್ಷಿಸುತ್ತಾರೆ? ಕೊನೆಗೆ ತಮ್ಮ ಮತ ಯಾವುದೊ, ಪರ ಮತಯಾವುದೊ ಗುರುತಿಸಲಾರದವರು ಕೂಡಾ ಮತರಕ್ಷಕರಂತೆ ಬಜಾರಿಗೆ ಬಂದು, ತಮ್ಮ ಮತವನ್ನೇ ಪರಮತವಾಗಿ ತಿಳಿದು, ತಮ್ಮ ಮತದವರ ಮೇಲೆಯೇ ದಾಳಿ ಮಾಡುವವರು ಹಿಂದೂಮತವನ್ನು ಕಾಪಾಡುವ ಸದಸ್ಯರಾ? ಭಗವದ್ಗೀತೆಯನ್ನು ಬೋಧಿಸುತ್ತಾ ಅದರಲ್ಲಿ ರಾಜವಿದ್ಯಾ

ರಾಜಗುಹ್ಯ ಯೋಗದಲ್ಲಿ 23ನೇ ಶ್ಲೋಕವನ್ನು ಓದಿ ಅದರ ವಿವರವನ್ನು ಹೇಳಿಕೊಳ್ಳುವ ಹಿಂದೂಗಳ ಗುಂಪನ್ನು ನೋಡಿ ಅಲ್ಲೇನೊ ಪರಮತ ಬೋಧನೆ ನಡೆಯುತ್ತಿದೆಯೆಂದು ತಿಳಿದು ಅಲ್ಲಿಗೆ ಹೋದರೆ, ಅಲ್ಲಿ ಅನ್ಯದೇವತೆಗಳನ್ನು ಯಾರು ಶ್ರದ್ಧೆಯಿಂದ ಪೂಜಿಸುತ್ತಾರೊ ಅವರು ಮಾರ್ಗವನ್ನು ತಪ್ಪಿದವರೆಂದು, ಇತರೆ ದೇವತೆಗಳನ್ನು ಪೂಜಿಸುವವರು ದೈವಮಾರ್ಗವನ್ನು ಬಿಟ್ಟು ನಡೆದವರಾಗುತ್ತಾರೆಂದು ಆ ಶ್ಲೋಕಕ್ಕೆ ವಿವರವನ್ನು ಹೇಳುತ್ತಿರುವಾಗ, ಅಲ್ಲಿಗೆ ಹೋದ ಹಿಂದೂ ರಕ್ಷಕರು ಅವರೊಂದಿಗೆ ಘರ್ಷಣೆಗೆ ಇಳಿದಿದ್ದಾರೆ. ನೀವು ಪರಮತವನ್ನು ಬೋಧಿಸುತ್ತಿದ್ದೀರಾ. ಹಿಂದೂಮತದಲ್ಲಿ ಪ್ರತಿ ಚಿಕ್ಕ ದೇವತೆ ಯೊಂದಿಗೂ ಕೂಡಾ, ದೊಡ್ಡ ದೇವತೆಯವರೆಗು ಪೂಜಿಸುವುದು ಆಚಾರವಾಗಿ ಇರುವುದರಿಂದ ಇತರೆ ದೇವತೆಗಳನ್ನು ಯಾರನ್ನು ಮುಗಿಯ ಬಾರದೆಂದು ಹೇಳುತ್ತಿದ್ದಾರೆಂದರೇ ನೀವು ಬಹುಶಃ ಕ್ರೈಸ್ಥವ ಮತಕ್ಕೆ ಸೇರಿದವರಾಗಿರುತ್ತೀರಾ. ಆದ್ದರಿಂದ ಅನ್ಯದೇವತಾರಾಧನೆ ಮಾಡಬಾರದೆಂದು ಅನ್ನುತ್ತಿದ್ದಾರೆಂದು ವಾದನೆಗೆ ಇಳಿದಿದ್ದಾರೆ. ಆಗ ಅವರ ಮಧ್ಯ ನಡೆದ ಸಂಭಾಷಣೆ ಕೇಳಿದರೆ ಹಿಂದೂಮತ ರಕ್ಷಕರು ಹೇಗೆ ಇದ್ದಾರೋ ತಿಳಿಯಬಲ್ಲದು ನೋಡಿರಿ.

**ಹಿಂದೂ ಮತ ಬೋಧಕರು :–** ನೀವು ಅಂದುಕೊಂಡಂತೆ ನಾವು ಪರಮತದವರು ಅಲ್ಲ. ನಾವು ನಿಜವಾದ ಹಿಂದೂಗಳು. ನೀವು ಭಗವದ್ಗೀತೆಯನ್ನು ನೋಡಿರಿ. ಭಗವದ್ಗೀತೆಯಲ್ಲಿ ಹೇಳಿರುವುದೇ ನಾವು ಹೇಳುತ್ತಿದ್ದೇವೆ. ರಾಜ್ಯವಿದ್ಯಾ ರಾಜಗುಹ್ಯ ಯೋಗದಲ್ಲಿ 23ನೇ ಶ್ಲೋಕದಲ್ಲಿ **"ಅನ್ಯದೇವತಾರಾಧನೆಯಿಂದ ದೇವರ ಮಾರ್ಗವನ್ನು ತಪ್ಪಿದವರಾಗುತ್ತೀರೆಂದು"** ಹೇಳಿದ್ದಾರೆ ಒಂದುಸಲ ನೋಡಿರಿ.

**ಹಿಂದೂ ಮತ ರಕ್ಷಕರು :–** ನಾವು ಭಗವದ್ಗೀತೆಯನ್ನು ಓದಿದ್ದೇವೆ. ಅದರಲ್ಲಿ ಏನಿರುವುದು ತಿಳಿದಿದೆ. ಸರ್ವದೇವತೆಗಳನ್ನು ಪೂಜಿಸಿರೆಂದು ಗೀತೆಯಲ್ಲಿ ಹೇಳಿದ್ದಾರೆ, ಪೂಜಿಸಬೇಡವೆಂದು ಎಲ್ಲಿಯೂ ಹೇಳಲಿಲ್ಲ. ಹಿಂದೂ ಮತವು ಸಕಲ ದೇವತೆಗಳಿಗೆ ನಿಲಯ. ನಮಗೆ ತಿಳಿದಿಲ್ಲವೆನ್ನುತ್ತೀಯಾ? ನೀವು ದೇವತಾ ಪೂಜೆಗಳನ್ನು ಖಂಡಿಸುತ್ತಿದ್ದೀರೆಂದರೇ ಇದು ಅನ್ಯಮತ ಬೋದನೆಯೇ. ನೀವು ಇಲ್ಲಿಂದ ಹೋಗದಿದ್ದರೆ ನಿಮ್ಮ ಕಾಲನ್ನು ಮುರಿದುಹಾಕುತ್ತೇವೆ.

**ಹಿಂದೂ ಬೋಧಕರು:–** ಹಿಂದೂ ದೇಶದಲ್ಲಿ, ಹಿಂದೂಗಳ ಮಧ್ಯ ಭಗವದ್ಗೀತೆಯನ್ನು ಹೇಳಿಕೊಳ್ಳುವುದು ಕೂಡಾ ತಪ್ಪೇನಾ? ನಾವು ಹಿಂದೂಗಳು, ಭಗವದ್ಗೀತೆಯಲ್ಲಿನ ಸಮಾಚಾರ ಹೇಳಿಕೊಳ್ಳಬಾರದಾ?

**ಹಿಂದೂ ಮತ ರಕ್ಷಕರು :–** ನೀವು ಹೇಳಿಕೊಳ್ಳುವುದು ಭಗವದ್ಗೀತೆಯಲ್ಲ. ಭಗವದ್ಗೀತೆ ಮುಸುಗಿನಲ್ಲಿ ಬೈಬಲ್‌ನನ್ನು ಹೇಳುತ್ತಿದ್ದೀರ. ಬೈಬಲ್‌ನಲ್ಲಿ ಅನ್ಯದೇವತಾರಾಧನೆ ಮಾಡಬಾರದೆಂದು ಇದೆ. ಕ್ರೈಸ್ಥರು ಎಲ್ಲಿ ನೋಡಿದರೂ ಅದೇ ಹೇಳುತ್ತಿದ್ದಾರೆ. ಅದೇ ವಿಷಯವನ್ನೇ ಹೇಳುತ್ತಿರುವ ನೀವು ನಮ್ಮನ್ನು ನೋಡಿ ಭಗವದ್ಗೀತೆಯೆಂದು ಅನ್ನುತ್ತಿದ್ದೀರ.

**ಹಿಂದೂ ಬೋಧಕರು :–** ನೋಡಿರಿ, ಇದು ಭಗವದ್ಗೀತೆ. ನಿಮ್ಮ ಕಣ್ಣುಗಳಿಗೆ ಬೇರೆ ಗ್ರಂಥವಾಗಿ ಕಾಣಿಸುತ್ತಿದೆಯಾ! (ಎಂದು ಭಗವದ್ಗೀತೆಯನ್ನು ಅವರಿಗೆ ತೋರಿಸುವುದು ನಡೆದಿದೆ. ಆದರೂ ಅವರು ಮಾತುಮಾತಿಗೂ ಕೋಪವನ್ನು ಪ್ರದರ್ಶಿಸುತ್ತಾ ಒಬ್ಬರಿಗೊಬ್ಬರು ಗುಂಪುಗಳಾಗುತ್ತಾ, ಮೊದಲಿದ್ದ ಹತ್ತು ಜನರಿಗೆ ಇನ್ನೂ ಸ್ವಲ್ಪ ಜನರು ಸೇರಿ ಸುಮಾರು 50 ಜನರವರೆಗು ಜಮ ಆಗಿದ್ದಾರೆ.)

**ಹಿಂದೂ ಮತ ರಕ್ಷಕರು :–** ಇದು ಭಗವದ್ಗೀತೆನಾ! ಕೃಷ್ಣನು ಅರ್ಜುನನು ಇರುವಕಡೆ ಯಾರೋ ಮುದುಕರಿರುವಂತೆ, ಗಡ್ಡ ಬೆಳೆದವರು ಇದ್ದಾರಲ್ಲವೇ! ಗಡ್ಡವನ್ನು ಇಟ್ಟುಕೊಂಡು ಬೋಧಿಸುವ ಆತನು ಯೇಸು ಆಗಿರುತ್ತಾನೆ. ಆತನು ಯೇಸೇ ಅಲ್ಲವೇ!

**ಹಿಂದೂ ಬೋಧಕರು :–** ಗಡ್ಡ ಇರುವ ಆತನು ಕೃಷ್ಣನು. ಕೃಷ್ಣನು 90 ವರ್ಷಗಳ ವಯಸ್ಸಿನಲ್ಲಿ ಭಗವದ್ಗೀತೆಯನ್ನು ಬೋಧಿಸಿದ್ದಾನೆ. ಅದಕ್ಕೆ ಗಡ್ಡವಿದೆ. ಆತನ ತಲೆಮೇಲೆ ಕೀರಿಟವೂ ಕೂಡಾ ಇದೆ ಅಲ್ಲವೇ! ವೃದ್ಧಾಪ್ಯದಲ್ಲಿ ಬೋಧಿಸಿದ್ದಾನೆನ್ನುವ ಗುರುತಿಗಾಗಿ ಹಾಗೆ ಗೊಂಬೆಯನ್ನು ಚಿತ್ರಿಸಿದ್ದೇವೆ. ಅದು ಏನೂ ವಿಚಿತ್ರವಲ್ಲ ಅಲ್ಲವೇ!

**ಹಿಂದೂ ರಕ್ಷಕರು :–** ನಾವು ಬೈಬಲ್‌ನನ್ನು, ಯೇಸು ಗೊಂಬೆಯನ್ನು ಕಂಡುಕೊಳ್ಳಲಾರೆವಾ! ಇದು ನಿಜಕ್ಕೂ ಯೇಸು ಗೊಂಬೆಯೇ. ಮೇಲಾಗಿ ಭಗವದ್ಗೀತೆ ಮೇಲೆ ತ್ರೈತ ಸಿದ್ಧಾಂತ ಭಗವದ್ಗೀತೆಯೆಂದು ಇದೆ. ತ್ರೈತ ಎಂದರೂ, ತ್ರಿತ್ವ ಎಂದರೂ ಎರಡೂ ಒಂದೇ. ತ್ರಿತ್ವವು ಕ್ರೈಸ್ತರ ನಿನಾದ. ಇದೆಲ್ಲ ಕ್ರೈಸ್ಥವವು ಮೇಲಕ್ಕೆ ಕಾಣಿಸುತ್ತಿದೆ. ಮೇಲಾಗಿ ದೇವತಾರಾಧನೆ ಮಾಡಬಾರದೆಂದು ಹೇಳುತ್ತಿದ್ದಾರೆ. ನೀವೂ ಬೋಧಿಸಿದರೇ ನಾವು ಒಪ್ಪಿಕೊಳ್ಳುವುದಿಲ್ಲ. ಇಲ್ಲಿಂದ ಹೋಗಬೇಕಾದ್ದೇ.

**ಹಿಂದೂ ಬೋಧಕರು:– "ತ್ರೈತ ಸಿದ್ಧಾಂತ"** ಎನ್ನುವುದು ಹಿಂದೂಮತದಲ್ಲಿ ದ್ವೈತ, ಅದ್ವೈತ ಸಿದ್ಧಾಂತಗಳ ಹಾಗೆ ಒಂದು ಸಿದ್ಧಾಂತ. ಇದು ಮೂರನೆ ಸಿದ್ಧಾಂತ ಆಗಿರುವುದರಿಂದ ತ್ರೈತ ಸಿದ್ಧಾಂತ" ಎಂದು ಹೇಳಿದ್ದೇವೆ. ಈ ಭಗವದ್ಗೀತೆಯನ್ನು ನಾವು ಒಬ್ಬರೇ ಅಲ್ಲ ದೇಶದಲ್ಲಿ ಅನೇಕ ಜನರು ಓದುತ್ತಿದ್ದಾರೆ. ಎಲ್ಲದಕ್ಕಿಂತ ಒಳ್ಳೆಯ ವಿವರವನ್ನು ಕೊಟ್ಟಿದೆ ಆದ್ದರಿಂದ ಇದನ್ನೇ ಹೆಚ್ಚುಜನರು ಅನುಸರಿಸುತ್ತಿದ್ದಾರೆ. (ಈ ವಿಧವಾಗಿ ಎಷ್ಟು ಹೇಳಿದರೂ ಅಲ್ಲಿ ಗುಂಪುಕೂಡಿದ ಹಿಂದೂ ರಕ್ಷಕರು ಸ್ವಲ್ಪವೂ ಕೇಳದಂತೆ ಅಸಭ್ಯವಾಗಿ ಪ್ರವರ್ತಿಸುವುದಕ್ಕೆ ಪ್ರಯತ್ನಿಸುತ್ತಿರುವಾಗ ಕೊನೆಯದಾಗಿ ಹಿಂದೂಬೋಧಕರು ಹೀಗೆ ಹೇಳಿದ್ದಾರೆ)

"ನಾವು ಎಷ್ಟು ಹೇಳಿದರೂ ನಮ್ಮ ಮಾತನ್ನು ಗ್ರಹಿಸದೆ, ನಾವು ಹಿಂದೂಗಳಾಗಿದ್ದು ಹಿಂದೂ ಬೋಧನೆಗಳನ್ನು ಹೇಳುತ್ತಿದ್ದರೂ ಸಾಕ್ಷ್ಯಾತ್ತು ಭಗವದ್ಗೀತೆಯನ್ನೇ ಹೇಳುತ್ತಿದ್ದರೂ, ನಮ್ಮನ್ನು ಹಿಂದೂಗಳು ಅಲ್ಲವೆನ್ನುವುದು ಪರಮತದವರೆನ್ನುವುದು, ನಮ್ಮ ಭಗವದ್ಗೀತೆಯನ್ನು ಬೈಬಲಾಗಿ ಹೇಳುವುದು, ಕೃಷ್ಣನಿಗೆ ಗಡ್ಡ ಇದ್ದರೇ ಯೇಸು ಎಂದು ಹೇಳುವುದು, ಇದೆಲ್ಲಾ ಏನು ಚೆನ್ನಾಗಿಲ್ಲ. ನೀವೂ ಹಿಂದೂಗಳೇ ನಾವು ಹಿಂದೂಗಳೇ ಆದರೂ, ನಿಮ್ಮಿಂದ ನಾವು ಕಳ್ಳರಂತೆ ಚಿತ್ರಿಸಲ್ಪಟ್ಟಿದ್ದೇವೆ. ನೀವು ಮಾತುಮಾತಿಗೂ ನಮ್ಮನ್ನು ಕ್ರೈಸ್ಥರೆನ್ನುವುದು ಒಳ್ಳೆಯ ಕೆಸವಲ್ಲ ನಿಮ್ಮಲ್ಲಿ ಒಬ್ಬನು ಕೂಡಾ ಜ್ಞಾನ ತಿಳಿದದೊಡ್ಡವರು ಇಲ್ಲ. ಎಲ್ಲಾ ಚಿಕ್ಕವಯಸ್ಸಿನವರು ನಿಮಗೇನು ತಿಳಿದಿಲ್ಲ. ನಿಮ್ಮ ಹಿರಿಯರನ್ನು ಕರೆಯಿರಿ ಮಾತನಾಡುತ್ತೇವೆ.

(ಆಗ ಅವರಲ್ಲೊಬ್ಬನು "ನಮ್ಮ ಹಿರಿಯರು ಹೇಳಿದ್ದರೇನೆ ಇಲ್ಲಿಗೆ ಬಂದಿದ್ದೇವೆ" ಎಂದನು. ಆಗ ಹಿಂದೂ ಬೋಧಕರಾಗಿರುವ ಅವರಿಗೆ ಇದೇನೊ ಮೊದಲಿನಿಂದ ಹಾಕಿಕೊಂಡ ಪಥಕದ ಪ್ರಕಾರ ನೀವು ಬಂದಿದ್ದೀರೆಂದು ತಿಳಿದು ಕೊನೆಯದಾಗಿ ಇವರೊಂದಿಗೆ ಏನು ಮಾತನಾಡಬಾರದೆಂದು ತಿಳಿದು ಅಲ್ಲಿಂದ ಹೋಗುವುದು ನಡೆದಿದೆ.)

ಅಲ್ಲಿ ನಡೆದ ಸಂಘಟನೆಯಲ್ಲಿ ಎಲ್ಲಾ ಯುವಕರು ಹುಡುಗರು ಬಂದು ಮಾತನಾಡುವುದು, ಅವರಹಿಂದೆ ಕೆಲವರು ಹಿರಿಯರಿದ್ದು ಅವರನ್ನು ಕಳಿಸುವುದು ನಡೆದಿದೆ. ನಡೆದ ಸಂಘಟನೆಗೆ ಸ್ವಲ್ಪ ಬಾಧೆಪಟ್ಟ ಹಿಂದೂ ಬೋಧಕರು ಒಂದು ಪ್ರಸ್ ಕ್ಲಬ್‌ನೊಳಗೆ ಹೋಗಿ ಈ ವಿಷಯವನ್ನು ವರಧಿಗಾರರಿಗೆಲ್ಲ ತಿಳಿಯುವಂತೆ ಎಲ್ಲರನ್ನೂ ಸಮಾವೇಶಪಡಿಸಿ, ನಿನ್ನೆಯ ದಿನ ನಡೆದ ವಿಷಯವೆಲ್ಲ ಹೇಳಿ, "ಈ ಮಧ್ಯಕಾಲದಲ್ಲಿ ಹಿಂದೂಮತ ರಕ್ಷಣಾ ಸಂಸ್ಥೆಗಳ ದಬ್ಬಾಳಿಕೆ ಹೆಚ್ಚಾಗಿ ಹೋಗಿದೆ. ನಾವು ಭಗವದ್ಗೀತೆಯನ್ನು ಹೇಳಿಕೊಳ್ಳುತ್ತಿದ್ದರೂ ನಮ್ಮ ಹತ್ತಿರಕ್ಕೆ ಬಂದು, ನೀವು ಪರಮತ ಬೋಧನೆಗಳು ಹೇಳುತ್ತಿದ್ದೀರೆಂದು ಆರೋಪಿಸಿ ನಮ್ಮೊಂದಿಗೆ ಘರ್ಷಣೆಗೆ ಇಳಿದಿದ್ದಾರೆ. ಈ ವಿಧವಾಗಿ ಹಿಂದೂಗಳೇ ಹಿಂದೂಗಳನ್ನು ಗುರುತಿಸಲಾರದೆ ನಮ್ಮಮೇಲೆ ದಾಳಿಗಳು ಮಾಡುವುದಕ್ಕೆ ಪ್ರಾರಂಭಿಸಿದಾಗ ನಾವು ಹಿಂದೂಗಳಾಗಿ, ಹಿಂದೂಮತದಲ್ಲಿ ಇರಲಾರದೆ ಹೋಗುತ್ತಿದ್ದೇವೆ. ಹಿಂದೂಮತ ರಕ್ಷಣೆ ಎನ್ನುವ ಹೆಸರು ಇಟ್ಟುಕೊಂಡ ಹುಡುಗನು ಕೂಡಾ ನಮ್ಮನ್ನು ಎದುರಿಸಿ ಮಾತನಾಡುತ್ತಿದ್ದಾನೆ. ಅವರಿಗೆ ಹಿಂದೂ ಧರ್ಮಗಳನ್ನು ಕುರಿತಾಗಲಿ, ಹಿಂದೂ ಜ್ಞಾನವನ್ನು ಕುರಿತಾಗಲಿ ತಿಳಿಯದಿದ್ದರೂ ನಮ್ಮನ್ನು ಕ್ರೈಸ್ಥರಾಗಿ ಚಿತ್ರಿಸಿ ಮಾತನಾಡಿದ್ದಾರೆ. ಇದು ತಿಳಿಯದೆ ಮಾಡಿದ ತಪ್ಪಲ್ಲ. ಅದೇ ಕೆಲಸವಾಗಿ ತಿಳಿದು ಮಾಡಿರುವುದಾಗಿ ನಮಗೆ ಅರ್ಥವಾಗುತ್ತಿದೆ. ಹೀಗೇ ನಮ್ಮನ್ನು ಹೇಳನಮಾಡಿ ಮಾತನಾಡಿದರೆ ನಾವು ಹಿಂದೂಮತದಲ್ಲಿ ಹಿಂದೂಗಳಾಗಿ ಇರಲಾರೆವು. ನಾವು ಇತರೆ ಮತದೊಳಗೆ ಹೋಗದೆ ತಪ್ಪುವುದಿಲ್ಲ. ಇಲ್ಲಿಗೆ ಇಂತಹ ಸಂಘಟನೆಗಳು ನಡೆಯುವುದಿಲ್ಲ ಎಂದು ಹಿಂದೂ ರಕ್ಷಕರು

ಭರವಸೆ ಕೊಟ್ಟರೆ ನಾವು ಹೀಗೇ ಹಿಂದೂಗಳಾಗಿ ಇರುತ್ತೇವೆ. ಇಲ್ಲದಿದ್ದರೇ ನಾವು, ನಮ್ಮ ಅಭಿಮಾನಿಗಳು, ಅನುಚರರು, ನಮ್ಮ ತ್ರೈತ ಸಿದ್ಧಾಂತ ಜ್ಞಾನ ತಿಳಿದವರು ಒಟ್ಟು ಪ್ರಸ್ತುತ ಹತ್ತು ಸಾವಿರ (10,000) ಜನ ಇತರೆ ಮತದೊಳಗೆ ಹೋಗಬೇಕಾಗಿ ಬರುತ್ತದೆ. ಈಗ ಹಿಂದೂ ರಕ್ಷಣಾ ಸಂಸ್ಥೆಗಳು ನಮಗೆ ಕೊಡುವ ಭರವಸೆಯನ್ನನುಸರಿಸಿ ಇರುತ್ತದೆ" ಎಂದು ಪ್ರಸ್ ಮೀಟಿಂಗ್‌ನಲ್ಲಿ ಹೇಳುವುದು ನಡೆದಿದೆ. ಹಾಗೆ ಮೀಡಿಯಾ ಮೂಲಕ ನ್ಯೂಸ್ ಪೇಪರ್‌ನಲ್ಲಿ ಪ್ರಕಟಿಸಿದಾಗ ಎರಡನೆ ದಿನ ಅದಕ್ಕೆ ಸಂಬಂಧಿಸಿದ ಅದಕ್ಕೆ ಮತ್ತೊಂದು ನ್ಯೂಸ್ ಪೇಪರ್‌ನಲ್ಲಿ ಉತ್ತರ ಬರುವುದು ನಡೆದಿದೆ. ಅದು ಹೀಗೆ ಇದೆ.

"ನೀವು ಹಿಂದೂಗಳಾಗಿದ್ದು ಹಿಂದೂ ಮುಸುಗಿನಲ್ಲಿ ಪರಮತಗಳನ್ನು ಪ್ರಚಾರ ಮಾಡುತ್ತಿದ್ದೀರ. ಅಂತಹವರು ನಮ್ಮ ಹಿಂದೂಮತದಲ್ಲಿ ಇರಬಾರದು. ನೀವು ಹಿಂದೂಮತದಲ್ಲಿದ್ದು ಹಿಂದೂ ಮತಕ್ಕೆ ನಷ್ಟ ತರುತ್ತಿದ್ದೀರಾ. ನೀವು ನಮ್ಮ ಮತವನ್ನು ಬಿಟ್ಟುಹೋಗಿ. ನಮ್ಮ ಮತದಲ್ಲಿ ಇಲ್ಲದಂತೆ ನೀವು ಯಾವ ಮತದೊಳಗೆ ಹೋದರೂ ನಮಗೆ ನಷ್ಟವಿಲ್ಲ" ಎಂದು ಬರೆದಿದ್ದಾರೆ. ಆ ವಾರ್ತೆಯನ್ನು ನೋಡಿದ ಹಿಂದೂ ಬೋಧಕರಾದವರು ಇತರೆ ಮತದೊಳಗೆ ಒಬ್ಬರು ಕೂಡಾ ಹೋಗಲಿಲ್ಲ. ಹಾಗೆ ಇತರೆ ಮತದೊಳಗೆ ಹೋದರೆ ಹಿಂದೂಮತ ಒಂದೇಬಾರಿ ಹತ್ತು ಸಾವಿರ ಜನರನ್ನು ಕಳೆದುಕೊಳ್ಳುತ್ತದೆ. ಮುಖ್ಯವಾದ ಗುರುಗಳೇ ಮತವನ್ನು ಬಿಟ್ಟುಹೋದರೆ ಅವರ ಅನುಚರರು ಎಷ್ಟೋ ಪ್ರಾಂತಗಳಲ್ಲಿ ಎಷ್ಟೋ ಜನ ಇರುತ್ತಾರೆ ಅಲ್ಲವೆ! ಅವರು ಕೂಡಾ ನಮ್ಮ ಗುರುವಿಲ್ಲದ ಮತ ನಮಗೆ ಬೇಡವೆಂದು ಹಿಂದೂಮತವನ್ನು ಬಿಡುವ ಅವಕಾಶವಿದೆ. ಹಾಗೆ ಎಲ್ಲರೂ ಬದಲಾದರೆ ನಂತರ ಅವರ ಸಂಖ್ಯೆ ಲಕ್ಷದವರೆಗೆ ಆಗುತ್ತದೆ. ಇಲ್ಲಿಯವರೆಗು ಕ್ರೈಸ್ಥರು, ಒಂದು ಕಡೆ ಮುಸ್ಲಿಮ್‌ರು, ಒಂದು ಕಡೆ ಹಿಂದೂಗಳನ್ನು ಮೀನುಗಳ ಕೆರೆಯಲ್ಲಿ ಮೀನುಗಳನ್ನು ಹಿಡಿದಂತೆ ತಮ್ಮ ಕಡೆ ಸೆಳೆದುಕೊಂಡಿದ್ದಾರೆ. ಹಿಂದೂಗಳಿಂದ ಮಾತಾಂತರ ನಡೆದವರಲ್ಲಿ ಶೇ. 80 ರಷ್ಟು ಕ್ರೈಸ್ಥರೊಳಗೆ, ಶೇ. 20 ರಷ್ಟು ಮುಸ್ಲಿಮ್‌ರೊಳಗೆ ಬದಲಾಗಿದ್ದಾರೆ.

ಹಾಗೆ ಬದಲಾಗಿಹೋಗುವುದಕ್ಕೆ ಇತರ ಮತದವರ ಪ್ರಚಾರವೇ ಕಾರಣವಲ್ಲ. ಮೊಟ್ಟಮೊದಲನೆಯದು ಸ್ವಮತದಲ್ಲಿನ ಕುಲವಿವಕ್ಷವೇ ಕಾರಣ.

ಹಿಂದೂಮತದಲ್ಲಿ ಅಗ್ರಕುಲಗಳ ಅವರ ಕುಲವಿವಕ್ಷದಿಂದ ಬಹಳಜನ ಇತರೆ ಮತದೊಳಗೆ ಮಾರ್ಪಟ್ಟಿದ್ದಾರೆ. ಅಂತಹವರು ನೂರಕ್ಕೆ 60 ಜನರಿದ್ದಾರೆ. ಶೇ. 60 ರಷ್ಟು ಕುಲವಿವಕ್ಷದಿಂದ ಬದಲಾದವರು, ಜ್ಞಾನಕ್ಕಾಗಿ ಬದಲಾದವರು ಸುಮಾರು ಶೇ. 10 ರಷ್ಟು ಇದ್ದಾರೆ. ಲಾಭಕ್ಕಾಗಿ ಬದಲಾದವರು ಶೇ. 30 ರಷ್ಟು ಇದ್ದಾರೆ. ಯಾರು ಹೇಗೆ ಬದಲಾದರೂ ಮತವನ್ನು ರಕ್ಷಿಸಬೇಕೆಂಬ ಉದ್ದೇಶದಲ್ಲಿ ಮತರಕ್ಷಣಾ ಸಂಘಗಳನ್ನು ಇಟ್ಟವರೇ, ಮತಾಂತರಕ್ಕೆ ಮುಖ್ಯಕಾರಕರಾಗಿ ಇದ್ದಾರೆ. ಮತರಕ್ಷಣಾ ಸಂಘಗಳಲ್ಲಿ ಮೇಲೆ ಇರುವ ಕೀಲಕ ವ್ಯಕ್ತಿಗಳು ಅಗ್ರಕುಲಕ್ಕೆ ಸಂಬಂಧಿಸಿದವರೇ ಇರುತ್ತಾರೆ. ಅವರು ಸಂಘದಲ್ಲಿ ತಮ್ಮ ಕೆಳಗೆ ಕೆಲಸ ಮಾಡುವವರಿಗೆ ಮತ ರಕ್ಷಣೆಯನ್ನು ಕುರಿತು, ಮತವನ್ನು ಕಾಪಾಡು ವಿಧಾನವನ್ನು ಕುರಿತು ದೊಡ್ಡದಾಗಿ ಹೇಳುತ್ತಿರುತ್ತಾರೆ. ಎಲ್ಲಿಯಾದರೂ ಮತಾಂತರ ನಡೆಯುತ್ತಿದೆಯೆಂದು ತಿಳಿದರೆ ನಮ್ಮ ಪ್ರಾಣಗಳನ್ನು ಅಡ್ಡಹಾಕಿ ಯಾದರೂ ಅದನ್ನು ತಡೆಯಬೇಕೆಂದು, ಮಾತಾಂತರ ಮಾಡುವವರನ್ನು ಸುಮ್ಮನೆ ಬಿಡಬಾರದೆಂದು, ಮತಕ್ಕಾಗಿ ಹೆಚ್ಚಾಗಿ ತಾಪತ್ರಯಪಡಬೇಕೆಂದು, ಹಾಗೆ ಪಟ್ಟರೆ ಅದೇ ದೇಶಭಕ್ತಿಯೆಂದು ಹೇಳಿ ತಮ್ಮ ಸಂಘದಲ್ಲಿರುವವರು ತಾವು ಏನು ಹೇಳಿದರೇ ಅದನ್ನು ಆಚರಿಸುವಂತೆ ತಯಾರು ಮಾಡುತ್ತಾರೆ. ಎಲ್ಲಾದರೆ ತಮ್ಮ ಕುಲವಲ್ಲದವರು ಜ್ಞಾನಬೋಧನೆಗಳು ಮಾಡುತ್ತಿರುತ್ತಾರೊ ಅವರನ್ನು ಮೇಲಕ್ಕೆ ಬರಲು ಬಿಡಬಾರದೆಂದು ತಿಳಿದು ಅವರನ್ನು ಪರಮತ ಬೋಧಕರಾಗಿ ಚಿತ್ರಿಸಿ ತೋರಿಸುತ್ತಾರೆ. ಅವರು ಹಿಂದೂಮತದಲ್ಲಿ ಹಿಂದೂಗಳಾಗಿದ್ದು ಹಿಂದೂ ಜ್ಞಾನವನ್ನೇ ಹೇಳುತ್ತಿದ್ದರೂ, ಅಂತಹವರು ತಮಗೆ ಪೋಟಿಯಾಗಿರುತ್ತಾರೆಂದು, ತಾವು ಹೊರತು ಯಾರೂ ಗುರುಗಳಾಗಿ ಇರಬಾರದೆಂದು ಹಿಂದೂಮತದಲ್ಲಿ ತಮ್ಮ ದೊಡ್ಡಸ್ತಿಕೆ ಹೊರತು ಇತರೆ ಕುಲಸ್ಥರ ದೊಡ್ಡಸ್ತಿಕೆ ಇರಬಾರದೆಂದು ತಿಳಿದವರಾಗಿ, ಮೇಲ್ನೋಟಕ್ಕೆ ಹಿಂದೂಮತವನ್ನು

ರಕ್ಷಿಸುತ್ತೇವೆಂದು ಹೇಳುತ್ತಾ ತಮ್ಮ ಕೆಳಗೆ ಕೆಲಸ ಮಾಡುವವರನ್ನು ತಮ್ಮ ಮತದವರ ಮೇಲೆ ಪ್ರೇರೇಪಿಸಿ, ಪರಮತ ಪ್ರಚಾರವನ್ನು ಮಾಡುತ್ತಿದ್ದಾರೆ ಎಂದು ಅಸತ್ಯದ ಆರೋಪಣೆಯನ್ನು ಮಾಡಿ, ಅವರ ಮೇಲಕ್ಕೆ ಉರಿದುಂಬಿಸಿ ಕಳಿಸಿದಾಗ ಮುಂದೆಹಿಂದೆ ಆಲೋಚನೆ ಮಾಡದ ಸಂಘದಲ್ಲಿ ಕೆಲಸ ಮಾಡುವ ಸದಸ್ಯರು ಬಾಣದಂತೆ ಮುಂದಕ್ಕೆ ಹೋಗುತ್ತಾರೆ. ಹಾಗೆ ಹೋಗುವ ಅವರಿಗೆ ವಾಸ್ತವವಾಗಿ ಹಿಂದೂ ಧರ್ಮಗಳು ಯಾವುದು ತಿಳಿದಿರುವುದಿಲ್ಲ. ಸಂಘದ ಹಿರಿಯರು ಧರ್ಮಗಳನ್ನು ಕುರಿತು ತಿಳಿಯದಂತೆ ಮಾಡಿರುತ್ತಾರೆ. ಅವರ ದೃಷ್ಠಿಯನ್ನು ಹಿಂದೂ ಧರ್ಮಗಳ ಮೇಲಕ್ಕಾಗಲಿ, ಹಿಂದೂ ಜ್ಞಾನದ ಮೇಲಕ್ಕಾಗಲಿ ಹೋಗದೇ ದೇಶಭಕ್ತಿ ಕಡೆ ತಿರುಗಿಸಿರುತ್ತಾರೆ. ಮತಭಕ್ತಿಯಾಗಲಿ, ಮತಜ್ಞಾನವಾಗಲಿ ಯಾವುದು ತಿಳಿಯದಂತೆ ಮಾಡಿ ದೇಶಭಕ್ತಿಯನ್ನು ಕಲಿಸಿರುತ್ತಾರೆ. ಹಾಗೆ ತಯಾರಾದ ಕಾರ್ಯಕರ್ತರಿಗೆ ಸ್ವಲ್ಪವೂ ಕೂಡಾ ಹಿಂದೂಜ್ಞಾನವು ತಿಳಿಯದೇ ಇರುವುದರಿಂದ ಹಿರಿಯರು ಯಾರನ್ನು ತೋರಿಸಿದರೆ ಅವರಮೇಲೆ ದಾಳಿ ಮಾಡುವುದಕ್ಕೆ ಹೋಗುತ್ತಿರುತ್ತಾರೆ. ಹಾಗೆ ಅವರು ಮಾಡುವ ದಾಳಿಗಳಲ್ಲಿ ಹತ್ತಕ್ಕೆ ಒಂದು ಪರಮತಗಳ ಮೇಲೆ ಇರುವಾಗ ಒಂಭತ್ತು ಸ್ವಮತದ ಮೇಲೆಯೇ ಇರುತ್ತದೆ. ಇದೆಲ್ಲವೂ ನಾವು ಅಸೂಯೆಯಿಂದ ಹೇಳುತ್ತಿಲ್ಲ. ಸ್ವಂತ ಅನುಭವದಿಂದ ಹೇಳುತ್ತಿದ್ದೇವೆ.

ಸ್ವಲ್ಪವಾದರೂ ಹಿಂದೂ ಜ್ಞಾನವಾಗಲಿ, ಹಿಂದೂ ಧರ್ಮಗಳಾಗಲಿ ತಿಳಿಯದ ಹಿಂದೂ ರಕ್ಷಣಾ ಕಾರ್ಯಕರ್ತರು ಇವರು ತಮ್ಮವರಾ, ಬೇರೆಯವರಾ ಎಂದು ಗಮನಿಸದೆ ಏನು ಹೇಳಿದರೂ ಅರ್ಥ ಮಾಡಿಕೊಳ್ಳದೆ ಪ್ರವರ್ತಿಸುತ್ತಾರೆ. ಭಗವದ್ಗೀತೆಯನ್ನು ತೋರಿಸಿದರೆ ಅದು ಭಗವದ್ಗೀತೆ ಎಂದು ಕೂಡಾ ತಿಳಿಯದ ಸ್ಥಿತಿಯಲ್ಲಿ ಅವರು ತಯಾರಾಗಿರುತ್ತಾರೆ. ಜ್ಞಾನವನ್ನು ಹೇಳಿದರೆ ಅದು ತಮ್ಮ ಜ್ಞಾನವೇಯೆಂದು ತಿಳಿಯದ ಸ್ಥಿತಿಯಲ್ಲಿ ಇರುತ್ತಾರೆ. ಬಂದವರಿಗೆ ದೇಶಭಕ್ತಿ, ರಾಜಕೀಯ ಹೊರತು ಹಿಂದೂಜ್ಞಾನ ಸ್ವಲ್ಪವೂ ತಿಳಿಯದು. ಕೊನೆಗೆ ತಮ್ಮ ಹಿಂದೂಗಳ ಮೇಲೆಯೇ ದಾಳಿಮಾಡುವುದು ನಡೆಯುತ್ತಿದೆ. ಹಾಗೆ ನಡೆದ

ನಂತರ ಬಾಧೆಗೆ ಗುರಿಯಾದ ಹಿಂದೂಗಳು, ಗುರುಗಳಾಗಿದ್ದು ಬೋಧಿಸುವುದು ಬಿಟ್ಟಾದರೂ ಬಿಡಬೇಕು, ಇಲ್ಲದಿದ್ದರೆ ಈ ಮತದಲ್ಲಿ ರಕ್ಷಣೆಯಿಲ್ಲವೆಂದು ಇನ್ನೊಂದು ಮತದೊಳಗಾದರೂ ಹೋಗಬೇಕು. ಹತ್ತುಸಾವಿರ ಜನ ಒಂದೇಬಾರಿ ಇತರೆ ಮತದೊಳಗೆ ಹೋಗುತ್ತಾರೆಂದು ತಿಳಿದರೂ, ನಂತರ ಅವರನ್ನು ಅನುಸರಿಸುವವರು ಸುಮಾರು ಲಕ್ಷದವರೆಗು ಅವರ ಹಿಂದೆ ಹೋಗುತ್ತಾರೆಂದು ತಿಳಿದರೂ, ನೀವು ನಮ್ಮ ಮತದಲ್ಲಿ ಇರಬೇಡಿರೆಂದು ಯಾವಾಗಾದರೆ ಹೇಳಿದ್ದಾರೋ, ಆಗ ಹಿಂದೂಮತವನ್ನು ರಕ್ಷಿಸುವುದಕ್ಕೆ ಅವರು ಇಲ್ಲವೆಂದು, ಮೇಲ್ನೋಟಕ್ಕೆ ಮಾತ್ರ ಹಿಂದೂರಕ್ಷಕರೆಂದು ಹೆಸರಿಟ್ಟುಕೊಂಡವರು ತಮ್ಮ ಅಧಿಪತ್ಯವನ್ನು ಕಾಪಾಡಿಕೊಳ್ಳುವುದಕ್ಕೆ ಮುಖ್ಯವಾಗಿ ಬೋಧಕರಾಗಿ ಇರುವವರನ್ನು, ಕೆಲವರಿಗೆ ಗುರುವಾಗಿರುವವರನ್ನು, ಮತದೊಳಗೆ ಇಲ್ಲದಂತೆ ಮಾಡಿದರೆ ತಮಗೆ ಯಾರೂ ಎದುರಿರುವುದಿಲ್ಲ ಎನ್ನುವ ಭಾವನೆ ಅವರಿಗಿದೆ ಯೆಂದು ಅರ್ಥವಾಗಿದೆ. ಈ ವಿಧವಾಗಿ ಅವರು ಪೂರ್ವದಲ್ಲಿ ಬುದ್ಧನ ಕಾಲದಲ್ಲಿ ಕೂಡಾ ಮಾಡಿದ್ದಾರೆ. ಆ ದಿನ ಹಿಂದೂಮತ ಒಂದೇಬಾರಿ ಸೀಳಿಹೋಗಿ 'ಬೌದ್ಧಮತ' ಎನ್ನುವ ಹೆಸರು ಬಂದಿದೆ. ಆ ದಿನ ಕೇವಲ ಅಗ್ರಕುಲದವರ ಕುತಂತ್ರದಿಂದಲೇ ಬುದ್ಧನನ್ನು ಎಷ್ಟು ತೊಂದರೆಕೊಟ್ಟರೂ ಆತನು ಹಿಂದೂಮತದಲ್ಲಿಯೇ ಇರುವುದರಿಂದ ಆತನು ಮತವನ್ನು ಬಿಟ್ಟುಹೋಗದಿದ್ದರೂ ಕೆಲವರು ಅಗ್ರನಾಯಕರಾಗಿ ಚಲಾವಣೆ ಆಗುವವರೆ ಬುದ್ಧನನ್ನು ಪರ ಮತದವನೆಂದು, ಆತನು ಪರ ಮತವನ್ನು ಸ್ಥಾಪಿಸಿದ್ದಾನೆಂದು ಹಿಂದೂಗಳೇ ಬುದ್ಧನದ್ದು ಬೌದ್ಧಮತವೆಂದು ಹೆಸರಿಟ್ಟು ಆತನನ್ನು ಹೊರಗೆ ಸಾಗಿಸಿದ್ದಾರೆ. ಆ ದಿನದಿಂದ ಅವರನ್ನು ಬೇರೆ ಮತವೆಂದು ಹೇಳುತ್ತಿದ್ದಾರೆ. ಅವರದ್ದು ಬೇರೆಮತವೆಂದು ಹೇಳಿದರೂ, ಇಂದಿಗೂ ಅವರು ಹಿಂದೂ ಗಳಿರುವಂತೆ ಕಾಷಾಯವನ್ನು ಧರಿಸಿ, ತಲೆಗಳನ್ನು ಬೋಡು ಮಾಡಿಸಿಕೊಂಡು ಬ್ರಹ್ಮಚಾರಿಗಳಾಗಿ ಪವಿತ್ರ ಜೀವನವನ್ನು ಕಳೆಯುತ್ತಾ ಹಿಂದೂ ಸಾಂಪ್ರದಾಯದ ಪ್ರಕಾರವೇ ಇದ್ದಾರೆ. ಅವರು ಸೀಳಿಹೋಗದಿದ್ದರೂ ಆ ದಿನ ಹಿಂದೂಗಳೇ ಅವರದ್ದು ಇಂತಹ ಮತವೆಂದು ಹೆಸರಿಟ್ಟಿದ್ದಾರೆ. ಅವರ ಹಾಗೆಯೇ

ರೂಪರೇಖೆಗಳಲ್ಲಿ ಒಂದೇ ವಿಧವಾಗಿದ್ದ ಆದಿಶಂಕರಾಚಾರ್ಯರವರನ್ನು ತಂದು ಅವರಂತೆ ಕಾಷಾಯವನ್ನು, ಅವರಂತೆ ತಲೆಬೋಳಿಸಿ ಅವರಿಗೆ ಪೋಟಿ ಎನ್ನುವಂತೆ ದೇಶವೆಲ್ಲ ಸುತ್ತಿಸಿದ್ದಾರೆ. ಹೀಗೆ ಯಾರೂ ಗುರುತಿಸಲಾರದ ಅನೈತಿಕ ಮೋಸಗಳು ಹಿಂದೂಮತದಲ್ಲಿ ನಡೆಯುತ್ತಾ ಬಂದಿವೆ. ಈ ದಿನ ಕೂಡಾ ನಡೆಯುತ್ತಿವೆ. ತಾವು ಯಾವುದಕ್ಕು ಹೊರಬೀಳದೆ ಚಕ್ರವನ್ನು ತಿರುಗಿಸುತ್ತಾ, ಉಳಿದ ಕುಲದವರನ್ನು ಕೆಲವರನ್ನು ತಮ್ಮ ಮಾತನ್ನು ಕೇಳುವವರನ್ನಾಗಿ ತಯಾರಿಮಾಡಿಟ್ಟುಕೊಂಡು, ಉಳಿದ ಕುಲದವರಿಂದಲೇ ಅವರ ಪಿತೂರಿ ನಡೆಸುತ್ತಿದ್ದಾರೆ. ಇದು ಈ ದಿನ ಜಾರಿಮಾಡುತ್ತಿರುವ ಹೊಸ ಪಥಕ. ನಮ್ಮ ಮಾತುಗಳು ಕೆಲವರಿಗೆ ನಾವು ಅಸೂಯೆಯಿಂದ ಹೇಳಿದಂತೆ ಕಾಣಿಸುತ್ತಿರುತ್ತದೆ. ನೀವು ಸ್ವಲ್ಪ ಬುದ್ಧಿಯನ್ನು ಉಪಯೋಗಿಸಿ ನೋಡಿದರೆ ನಾವು ಹೇಳುವ ಮಾತುಗಳು ನೂರಕ್ಕೆ ನೂರುಪಾಲು ಸತ್ಯವೆಂದು ತಿಳಿಯುತ್ತದೆ.

ಬುದ್ಧನು ಆ ದಿನ ಪ್ರತ್ಯೇಕವಾದ ದ್ಯಾನವನ್ನು ಬೋಧಿಸಿದ್ದಾನೆ ಹೊರತು ಮತವನ್ನು ಬೋಧಿಸಲಿಲ್ಲ. ಪ್ರತ್ಯೇಕ ದ್ಯಾನವನ್ನು ನೆಪವಾಗಿ ತೋರಿಸಿ ಹಿಂದೂಗಳೇ ಬುದ್ಧನದ್ದು ಬೇರೆ ಮತವೆಂದು ಸೀಳಿಸಿಹಾಕಿದ್ದಾರೆ. ಆ ದಿನ ದೇವತೆಗಳನ್ನು ಪೂಜಿಸದಂತೆ ದ್ಯಾನ ಮಾಡಿರೆಂದು ಹೇಳುವುದು ತಪ್ಪಿಲ್ಲ ಅಲ್ಲವೇ! ಭಗವದ್ಗೀತೆಯಲ್ಲಿ ಕೂಡಾ ಅನ್ಯದೇವತಾರಾಧನೆ ತಪ್ಪೆಂದು ಹೇಳಲಿಲ್ಲವಾ! ತಾವೇ ತಪ್ಪು ಮಾಡುತ್ತಾ ಅನ್ಯದೇವತೆಗಳನ್ನು ಪೂಜಿಸುವವರು, ಭಗವದ್ಗೀತೆಯ ಪ್ರಕಾರ ತಮ್ಮದು ತಪ್ಪೆಂದು ಅಂದುಕೊಳ್ಳದೆ ಅನ್ಯದೇವತಾರಾಧನೆ ಮಾಡಬೇಡ ವೆಂದು, ಅದಕ್ಕೆ ಬದಲು ದ್ಯಾನವನ್ನು ಮಾಡಿರೆಂದು ಹೇಳಿದವರದ್ದೆ ತಪ್ಪಾಗಿ ತೋರಿಸಿ ಅವರು ಹಿಂದುಗಳಲ್ಲವೆಂದು ಅವರನ್ನು ಹೊರಹಾಕಿದ್ದಾರೆ. ಬೌದ್ಧಮತವು ಹಿಂದೂಗಳು ಹೊರಹಾಕಿದಾಗ ಹೊರಬಿದ್ದಿದೆ. ಹಿಂದೂಗಳು ಬುದ್ಧನ ದ್ಯಾನವನ್ನು, ಆಧ್ಯಾತ್ಮಿಕತೆಯನ್ನು ವಿರೋಧಿಸಿ ಆತನನ್ನು ಹಿಂದೂಗಳೇ ಬೌದ್ಧಮತವೆಂದು ಹೆಸರಿಟ್ಟು ಹೊರಹಾಕಿದ್ದಾರೆ. ಇದನ್ನು ಅಲ್ಲಗಳೆಯುವುದಕ್ಕೆ ಸಾಧ್ಯವಿಲ್ಲ. ಆ ದಿನ ನಡೆದ ಸತ್ಯವಿದು. ಬುದ್ಧನನ್ನು ಬೌದ್ಧಮತವೆಂದು ಹೆಸರಿಟ್ಟು

ಹೊರಹಾಕುವುದಲ್ಲದೇ ಆತನಿಗೆ ವಿರುದ್ಧವಾಗಿ ಆದಿಶಂಕರನನ್ನು ತಂದು, ದೇಶದ ನಾಲ್ಕು ಮೂಲೆಗಳಲ್ಲಿ ನಾಲ್ವರು ದೇವತೆಗಳನ್ನು ಸ್ಥಾಪಿಸಿ ತಮ್ಮದು ತಪ್ಪಿಲ್ಲವೆನ್ನುವಂತೆ ಪ್ರವರ್ತಿಸಿದ್ದಾರೆ. ಆದಿಶಂಕರಾಚಾರ್ಯರನ್ನು ಆಕಡೆ ಈಕಡೆ ತಿರುಗಿಸುತ್ತಾ ಬುದ್ಧನ ವಿಷಯದಿಂದ ತಾವು ತಪ್ಪುಮಾಡಿದಂತೆ ಗುರುತಿಸದೇ ಎಲ್ಲರ ದೃಷ್ಟಿಯನ್ನು ಪಕ್ಕಕ್ಕೆ ಮರಳಿಸಿದ್ದಾರೆ.

ಆ ದಿನಗಳಲ್ಲಿ ಹೇಗೆ ಮಾಡಿ ತಿಳುವಳಿಕೆಯಿಂದ ಪ್ರವರ್ತಿಸಿ ಬುದ್ಧನನ್ನು ಚಿಕ್ಕ ನೆಪ ತೋರಿಸಿ ಹೇಗೆ ಹೊರಗೆ ಕಳಿಸಿದ್ದಾರೋ, ಈದಿನ ಕೂಡಾ ಅಂತಹ ಪ್ರಯತ್ನವೇ ಮಾಡುತ್ತಿದ್ದಾರೆಂದು ಹೇಳದೆ ತಪ್ಪಲಿಲ್ಲ. ಬುದ್ಧನನ್ನು ಹೊರಗೆ ಕಳಿಸಿದ ನಂತರ ಆದಿಶಂಕರಾಚಾರ್ಯರನ್ನು  ಗೊಂಬೆಯನ್ನು ಮಾಡಿ ಭಾರತದೇಶವೆಲ್ಲ ಅಲೆದಾಡಿಸಿ, ಬುದ್ಧನನ್ನು ಕುರಿತು ಆತನಿಗೆ ನಡೆದ ಅನ್ಯಾಯವನ್ನು ಕುರಿತು ಯಾರೂ ಆಲೋಚಿಸದಂತೆ ಮಾಡಿದ್ದಾರೆ. ಆದರೇ ಈ ದಿನ ಕೂಡಾ ಭವಿಷ್ಯತ್ತಿನಲ್ಲಿ ತಮಗೆ ಹಿಂದೂಮತದಲ್ಲಿ ಆತಂಕವಾಗಿ ತಯಾರಾಗುತ್ತಾರೇನೊ ಎಂದು ಅನುಮಾನದಿಂದ ಬುದ್ಧನ 'ದ್ಯಾನ'ವನ್ನು ತಪ್ಪಾಗಿ ತೋರಿಸಿದಂತೆ ಈಗಲೂ ಕೂಡಾ ಇಲ್ಲದ ತಪ್ಪನ್ನು ಹುಡುಕಿ ಅದನ್ನೇ ದೊಡ್ಡದಾಗಿ ತೋರಿಸಿ ಸುಮಾರು ಲಕ್ಷಜನರವರೆಗು ಹಬ್ಬಿರುವ ಜ್ಞಾನವನ್ನು ನೋಡಿ ಭಯಪಟ್ಟು, ಸಹಿಸಲಾರದೆ ತಪ್ಪಲ್ಲದ ತಪ್ಪನ್ನು ಸೃಷ್ಠಿಸಿ ಲಕ್ಷಜನರನ್ನು ಹಿಂದೂಮತದಿಂದ ಹೊರಗೆ ಕಳಿಸುವ ಪ್ರಯತ್ನ ಮಾಡುತ್ತಿದ್ದಾರೆ. ತಮಗೆ ಸರಿಹೋಗದ ಜ್ಞಾನ ಅವರ ಬಳಿ ಇರುವುದರಿಂದ, ಭಗವದ್ಗೀತೆ ಸೂತ್ರಗಳನ್ನೇ ಅವರು ಆಚರಿಸುತ್ತಿರುವುದರಿಂದ ಅವರನ್ನು ಹೊರಗೆ ಕಳಿಸಿ ಹಿಂದೂಮತದಲ್ಲಿ ಎದುರಿಲ್ಲದವರಾಗಿ ಇರಬೇಕೆಂಬ ಆಲೋಚನೆ ಈದಿನ ಹಿಂದೂ ರಕ್ಷಣೆ ಎಂದು ಹೆಸರಿರುವ ಸಂಸ್ಥೆಗಳ ಹಿರಿಯರ ಬಳಿ ಇದೆಯೆಂದು ತಿಳಿಯುತ್ತಿದೆ. ಬುದ್ದನು ಅನ್ಯದೇವತಾರಾಧನೆ ಬೇಡ ದ್ಯಾನ ಮಾಡಿರೆಂದು ಹೇಳಿದ್ದಾನೆ. ಅದು ಅಂದಿನ ತಪ್ಪು ಇಂದಿನ ತಪ್ಪು ಏನೆಂದರೇ!

ಸುಮಾರು 150 ವರ್ಷಗಳ ಕೆಳಗಿನವರೆಗು ಸ್ವರಗಳಲ್ಲಿ ಒಂದಾದ 'ಇ'ನಿಂದ ಹೇಳಲ್ಪಡುವ ಇಂದೂದೇಶ, ಇಂದೂಮತ ಎನ್ನುವ ಹೆಸರಿನಿಂದ ಇರುತ್ತಿತ್ತು. ಕಾಲಕ್ರಮವಾಗಿ ಅದು ಸ್ವಲ್ಪ ಬದಲಾವಣೆಯಾಗಿ ಹಿಂದೂದೇಶ, ಹಿಂದೂಮತವೆಂದು ಹೇಳುವುದಕ್ಕೆ ಅಭ್ಯಾಸವಾಗಿದ್ದಾರೆ. ಆದರೇ ಮಾತನಾಡುವ ಪ್ರತಿಶಬ್ಧಕ್ಕು ಒಂದು ಅರ್ಥವಿದ್ದೇ ಇರಬೇಕು. ಅರ್ಥವಿಲ್ಲದ ಮಾತು ವ್ಯರ್ಥ. ಈದಿನ ಅದೇ ವಿಧವಾಗಿ ಹೇಗೆ ಹುಡುಕಿದರೂ ಹಿಂದೂ ಎನ್ನುವ ಪದಕ್ಕೆ ಅರ್ಥವಿಲ್ಲ. ಅದೇ ವಿಷಯವನ್ನೆ ಹೊರಗೆ ಹೇಳಿ ನಮ್ಮದು ಹಿಂದೂಮತವಲ್ಲ, 'ಇಂದೂ' ಎನ್ನುವ ಪದವು ನಮ್ಮದು. 'ಹಿಂದೂ' ಎನ್ನುವ ಪದವು ಇತರೆ ಮತದವರು ಅದೇ ಕೆಲಸವಾಗಿ ಅಂಟಿಸಿದ್ದಾರೆ. ಇತರೆ ಭಾಷೆಯಲ್ಲಿ ಘೋರವಾದ ದೂಷಣೆ ಪದ. ತೆಲುಗು ಭಾಷೆಯಲ್ಲಿ ಯಾವ ಅರ್ಥವಿಲ್ಲದ ಪದ. ಇತರೆ ದೇಶ ಭಾಷೆಯಲ್ಲಿ ಕಳ್ಳ, ವ್ಯಭಿಚಾರಿ ಎಂಬ ಅರ್ಥಬರುವಂತೆ ಹಿಂದೂ ಪದವನ್ನು 150 ವರ್ಷಗಳ ಸಮಯದಲ್ಲಿ ಬದಲಾಯಿಸಿದ್ದಾರೆ. ಆ ಪದವನ್ನು ನಾವು ಹಿಂದೂ ಎಂದು ಹೇಳುತ್ತಿದ್ದರೆ, ಅವರು ನಗುತ್ತಿದ್ದರು. ಈದಿನ ಕೂಡಾ ನಮ್ಮ ತೆಲುಗು ಭಾಷೆಯಲ್ಲಿ ಅರ್ಥವಿಲ್ಲದ ಪದ. ಒಂದು ತೆಲುಗು ಭಾಷೆಯಲ್ಲಿಯೇ ಅಲ್ಲದೇ! ಭಾರತದೇಶಕ್ಕೆ ಸಂಬಂಧಿಸಿದ ಯಾವ ಭಾಷೆಯಲ್ಲಿ ಕೂಡಾ ಅದಕ್ಕೆ ಅರ್ಥವಿಲ್ಲವೆಂದು 2015ರಲ್ಲಿ ಪ್ರಭುತ್ವ ಹೊಂಶಾಖ ಕಾರ್ಯದರ್ಶಿಯೇ ಹೇಳಿದಂತೆ ವಾರ್ತಾಪತ್ರಿಕೆಯಲ್ಲಿ ಕೂಡಾ ಇದೆ.

ಇದೆಲ್ಲವೂ ದೃಷ್ಠಿಯಲ್ಲಿಟ್ಟುಕೊಂಡು ಪೂರ್ವದಿಂದ ಮೊನ್ನೆತನಕ ನಮ್ಮದು ಹಿಂದೂಮತವೆಂದು ಹೇಳಿ. 'ಇಂದೂ' ಗೆ ಈ ಅರ್ಥವು ಇದೆಯೆಂದು ಹೇಳಿ 'ಇಂದೂ' ಎಂದು ಬರೆದರೆ 'ಹಿಂದೂ' ಪದ ಇರುವವರೆಲ್ಲರದ್ದು ಹಿಂದೂಮತ, "ಇಂದೂ" ಪದ ಇರುವವರೆಲ್ಲರದ್ದು ಮತ್ತೊಂದು ಮತವೆಂದು ಒಂದು "ಇ" ಎನ್ನುವ ಅಕ್ಷರವನ್ನು ಹಿಡಿದುಕೊಂಡು ಲಕ್ಷಮಂದಿವರೆಗು ಇರುವ ಗುಂಪನ್ನು ಹಿಂದೂಗಳಿಂದ ಸೀಳಿಸಿ ಪಕ್ಕಕ್ಕೆ ಕಳಿಸುವಂತೆ ಸಂಚು ನಡೆಯುತ್ತಿದೆ ಯೆಂದು ಮೊದಲೇ ನಾವು ತಿಳಿಸುತ್ತಿದ್ದೇವೆ. ಈಗಾಗಲೇ ಇವರು ಬೇರೆ

ಮತವನ್ನು ತಯಾರು ಮಾಡಿದ್ದಾರೆಂದು ಆರೋಪಣೆಗಳು ಮಾಡುತ್ತಿದ್ದಾರೆ. ಯಾವ ಜ್ಞಾನ ಇಲ್ಲದವರು, ಮೇಲಿನವರ ಕೆಳಗೆ ಗುಲಾಮರಂತೆ ಕೆಲಸ ಮಾಡುವವರು ನಾವು ಏನು ಮಾಡುತ್ತಿದ್ದೇವೆ, ಏನು ಮಾತನಾಡುತ್ತಿದ್ದೇವೆಂದು ಸ್ವಲ್ಪವಾದರೂ ಆಲೋಚಿಸದಂತೆ, ಇಂದೂ ಎನ್ನುವುದು ಬೇರೆ ಮತವೆಂದು ಹೇಳುತ್ತಿದ್ದಾರೆಂದರೇ ಸ್ವಲ್ಪ ಆಲೋಚಿಸಬೇಕಾದ ವಿಷಯವೇ. ಹಾಗೆ ಅನ್ನುವುದೇ ಅಲ್ಲದೇ ನಿಮ್ಮ ಜ್ಞಾನವನ್ನು ಹೊರಗಿನ ಪ್ರಜೆಗಳಿಗೆ ಹೇಳಬೇಡಿರೆಂದು, ನಿಮ್ಮ ಗ್ರಂಥಗಳನ್ನು ಪ್ರಜೆಗಳಿಗೆ ಮಾರಬೇಡಿರೆಂದು ಹೆದರಿಸುತ್ತಿದ್ದಾರೆಂದರೇ, ಇವರನ್ನು ಕೂಡಾ ಬುದ್ಧನಂತೆ ಹೊರಗೆ ಕಳಿಸುವ ಕುತಂತ್ರ ನಡೆಯುತ್ತಿದೆಯೆಂದು ಹೇಳದೆ ತಪ್ಪಲಿಲ್ಲ. ಇಲ್ಲಿಯವರೆಗು ನಾವು ಹಿಂದೂಗಳೇ ನಮ್ಮ ಗ್ರಂಥಗಳಲ್ಲಿ ಕೂಡಾ ಕೆಲವು ಕಡೆ ಹಿಂದೂ ಪದವನ್ನೇ ಉಪಯೋಗಿಸಿದ್ದೇವೆ. ಕೆಲವು ಕಡೆ ಇಂದೂ ಎಂದು ಬರೆದರೂ (ಹಿಂದೂ) ಎಂದು ಬರೆದಿದ್ದೇವೆ. ನಾವು ಬೇರೆ ಮತವನ್ನು ತಯಾರುಮಾಡಲಿಲ್ಲ. ಇರುವ ಮತವೊಂದರ ಚರಿತ್ರೆಯನ್ನು ಜ್ಞಾಪಕ ಮಾಡಿ ಆ ಹೆಸರು ಇಟ್ಟಿದ್ದೇವೆಂದು ಹೇಳಿದರೂ ಕೇಳದ ಪರಿಸ್ಥಿತಿಯಲ್ಲಿ ಇದ್ದಾರೆಂದರೇ ಇದೇನೊ ಮೇಲಿಂದ ಹಿಂದೆ ಕುತಂತ್ರ ನಡೆಯುತ್ತಿದೆಯೆಂದು, ಅವರು ಪಕ್ಕಕ್ಕೆ ಹೋಗದಿದ್ದರೂ ಈಗಿನ ಹಿಂದೂ ಹಿರಿಯರೆ ಪಕ್ಕಕ್ಕೆ ಕಳಿಸುವಂತಿದ್ದಾರೆ.

ಈಗಾಗಲೇ ಇಂದೂಮತಕ್ಕಿಂತ ಬೇರೆಯಾಗಿದೆಯೆಂದು, ಅವರು ದೇವತೆಗಳನ್ನು ಪೂಜಿಸುವುದಿಲ್ಲವೆಂದು ಪ್ರಚಾರ ನಡೆಯುತ್ತಿದೆ. ಇಂದೂ ಧರ್ಮವೆಂದು ಬರೆದವರು ಹಿಂದೂಗಳಲ್ಲ, ಅವರು ಪ್ರತ್ಯೇಕ ಮತವನ್ನು ತಯಾರು ಮಾಡಿದ್ದಾರೆಂದು ಬಹಳಕಡೆ ಹೇಳಿಕೊಳ್ಳುವುದು ನಡೆಯುತ್ತಿದೆ. ಒಂದು ಅಕ್ಷರದಿಂದ ಮತವನ್ನೇ ಬದಲಾಯಿಸುವ ಹಿಂದೂಗಳು ಮತವನ್ನು ರಕ್ಷಿಸುವವರಾ, ಮತವನ್ನು ಸೀಳಿಸಿ ಭಕ್ಷಿಸುವವರಾ? ನೀವೇ ಆಲೋಚಿಸಿರಿ. ಒಂದು ಅಕ್ಷರವು ಕೂಡಾ ಬೇರೆ ಜಾತಿಯದ್ದೋ, ಬೇರೆ ಶಬ್ಧದ್ದೋ ಅಲ್ಲ. ಕೇವಲ ಒಂದೇ ಅಕ್ಷರವೇ ಒಂದು ಸ್ವರ 'ಇ' ಒಂದು ವ್ಯಂಜನ 'ಹಿ' ಒಂದೇ ತೆಲುಗು ಭಾಷೆಯಲ್ಲಿ ಸ್ವರ "ಇ" ನಿಂದ ಹೇಳಿರುವುದು ಒಂದುಮತ, ವ್ಯಂಜನ

"ಹಿ" ನಿಂದ ಹೇಳಿರುವುದು ಮತ್ತೊಂದು ಮತ ಎಂದರೇ ವಿಚಿತ್ರವಾಗಿದೆಯಲ್ಲವೇ! ಹಾಗೆ ಹೇಳಿದರೆ ವಿಚಿತ್ರವೇ ಆದರೂ, ಈದಿನ ಹಿಂದೂಮತದಲ್ಲಿನ ಹಿಂದೂ ರಕ್ಷಕರೆಂದು ಹೆಸರಿಟ್ಟುಕೊಂಡವರು ಅದೇ ವಿಚಿತ್ರವನ್ನು ಜಾರಿಮಾಡಿ ಮಾತನಾಡುತ್ತಿದ್ದಾರೆ. ಮಾತನಾಡುವವರು ಮುಂದಿರುವ ಕಡಿಮೆ ಕುಲಸ್ಥರಾದರೂ ಅವರ ಹಿಂದೆ ಇವರನ್ನು ನಡೆಸುವವರಿದ್ದಾರೆಂದು ನಮಗೆ ತಿಳಿದಿದೆ. ಇಂದೂ ಎಂದು ಹೇಳುವವರು ಅಗ್ರಕುಲದವರು ಅಲ್ಲ. ಒಂದುವೇಳೆ ಅಗ್ರಕುಲದವರೇ ಆಗಿದ್ದರೇ ಆ ಮಾತನ್ನೇ ಹೊರಗೆ ಬಾರದಂತೆ ಒಂದಾಗಿಯೇ ಇರುವಂತೆ ಮಾಡುತ್ತಿದ್ದರು. ಅವರ ದೊಡ್ಡಸ್ತಿಕೆಗೆ ಧಕ್ಕೆ ಇಲ್ಲವೆಂದುಕೊಳ್ಳುತ್ತಿದ್ದರು. ಇಂದೂ ಎನ್ನುವ ಪದವನ್ನು ಹೊರಗೆ ತಂದವರು ಅವರಿಗಿಂತ ಕಡಿಮೆ ಕುಲದವರಾದರೂ ಅದರಿಂದ ಇಲ್ಲಿ ಒಂದು ಅಕ್ಷರದ ಬಳಿ ದೊಡ್ಡ ಸಮಸ್ಯೆ ಬಂದಿದೆ.

ಹಿಂದೂಗಳಲ್ಲಿ ಎಷ್ಟೋಜನ ಮೇಧಾವಿಗಳಿದ್ದಾರೆ. ಎಲ್ಲರಿಗೂ ಆಧ್ಯಾತ್ಮಿಕದ ದೃಷ್ಠಿಯಿಲ್ಲ. ಕೆಲವು ಕುಲದ ಹಿರಿಯರಿಗೇ ಆಧ್ಯಾತ್ಮಿಕದ ದೃಷ್ಠಿಯಿದೆ. ಅವರೇ ಹಿಂದೂ ಮತ ರಕ್ಷಣೆಯಲ್ಲಿ ಹಿರಿಯರಾಗಿದ್ದು ಹಿಂದೂ ಮತವನ್ನು ರಕ್ಷಿಸದೇ, ಕೊನೆಗೆ ಸೀಳಿಹೋಗುವಂತೆ ಮಾಡುತ್ತಾ, ಅವರೇ ಸೀಳಿಸಿ ಹಾಕುತ್ತಾ, ಹಿಂದೂತ್ವವನ್ನು ಸರ್ವ ವಿಧಗಳಾಗಿ ನಾಶಮಾಡುತ್ತಿದ್ದಾರೆ. ಅವರಿಗೆ ಜೊತೆಯಾಗಿ ಕೆಲಸಕಾರ್ಯವಿಲ್ಲದವರು, ಎಲ್ಲಿಯೂ ಗುರುತು ಇಲ್ಲದವರು ಜೊತೆಯಾಗಿ ಅವರ ಚೇಷ್ಟೆಗಳನ್ನು ಅವರು ಮಾಡುತ್ತಿದ್ದಾರೆ. ಇಂದೂಗಳ ಪರವಾಗಿ ಕೆಲಸ ಮಾಡುವ ಭಾಸ್ಕರೆಡ್ಡಿಯನ್ನು ಹಿಂದೂಗಳ ಪರವಾಗಿ ಕೆಲಸಮಾಡುವ ಧೀರಜ್ ರೆಡ್ಡಿ ದಾಳಿಮಾಡಿ ಹೊಡೆದಿದ್ದಾನೆ. ಹೊಡೆದಾಡಿಕೊಳ್ಳುವವರು ಕೆಳಗಿನ ಕುಲಸ್ಥರೆ ಆದರೂ ನಾವೆಲ್ಲರೂ ಒಂದೇ ಅಲ್ಲವೇ! ನಮಗೆ ಕಿಚ್ಚು ಹಿಟ್ಟವರೆ ಮೇಲಿಂದ ನಾಟಕವನಾಡಿಸುತ್ತಿದ್ದಾರೆ ಅಲ್ಲವೆ! ಎಂದು ಆಲೋಚಿಸಲಿಲ್ಲ. ಒಬ್ಬ ರೆಡ್ಡಿ ಇನ್ನೊಬ್ಬ ರೆಡ್ಡಿಯನ್ನು ಹೊಡೆದರೆ ಮೇಲೆ ನಗುವವರು ಹಿಂದೂ ಹಿರಿಯರೇ ಎಂದು ತಿಳಿಯದೆ ದೇಶಭಕ್ತಿ, ಮತಭಕ್ತಿ ಎಂದು ಕೆಳಗಿನ ಕುಲದವರು ಮೋಸಹೋಗಿದ್ದಾರೆ. ಇತರರ ಮೇಲೆ ಕೂಡಾ ಚರಿತ್ರೆಯಲ್ಲಿ ದಾಳಿಮಾಡದಂತೆ ಮಾತುಗಳಿಂದಲೇ

ಎಂತಹವರನ್ನಾದರೂ ಮಾರ್ಪಡಿಸಿದ ಜ್ಞಾನವಿರುವುದು ಹಿಂದೂಮತ. ಚರಿತ್ರೆಯಲ್ಲಿ ಶಾಂತಿಮತ ಇಂದೂಮತವೆಂದು ಹೆಸರುವಾಸಿಯಾಗಿದೆ. ಅಂತಹ ಮತ ಕಲಿಯುಗದಲ್ಲಿ ಕುಲರಾಜಕೀಯ ಕೈಯಲ್ಲಿ ಸಿಲುಕಿಕೊಂಡು ಹೋಗಿದೆ. ಅಗ್ರಕುಲದವರ ಕೈಯಲ್ಲಿ ಉಳಿದ ಕುಲದವರೆಲ್ಲರೂ ಸಿಕ್ಕಿಕೊಂಡಿದ್ದಾರೆ. ಸಾನತನವಾಗಿ ಸೃಷ್ಠಿ ಆದಿಯಿಂದ ಬರುತ್ತಿರುವುದು ಇಂದೂ ಸಮಾಜ, ಇಂದೂ ಜ್ಞಾನ, ಸೃಷ್ಟ್ಯಾದಿಯಲ್ಲಿ ಹೇಳಲ್ಪಟ್ಟ ಇಂದೂ ಜ್ಞಾನವೇ ಸರ್ವಪ್ರಜೆಗಳಿಗೂ, ಸರ್ವಮತಗಳಿಗು ಆಧಾರ. ಆ ವಿಷಯವನ್ನು ಮರೆತುಹೋಗಿ ಈ ದಿನ ಅಗ್ರಕುಲದವರ ಕೈಯಲ್ಲಿ ಕೈ ಗೊಂಬೆಯಾಗಿ ಇರಬಾರದೆಂದು ಹಿಂದೂಗಳಿಗೆ ತಿಳಿಸುತ್ತಿದ್ದೇವೆ.

## ಸಮಾಪ್ತಿ



**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೊ, ಹಾಗೆ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅಗತ್ಯವಾಗುತ್ತದೆ.**



**ಅಸತ್ಯವನ್ನು ಸಾವಿರಜನ ಹೇಳಿದರೂ, ಅದು ಸತ್ಯವಲ್ಲ,**

**ಸತ್ಯವನ್ನು ಸಾವಿರಜನ ಅಲ್ಲಗಳೆದರೂ, ಅದು ಅಸತ್ಯವಲ್ಲ.**



# ಹಿಂದೂ ರಕ್ಷಣಾ! ಹಿಂದೂ ಭಕ್ಷಣಾ!!
# ಭಗವದ್ಗೀತೆಯನ್ನು ಓದದವನು ಹಿಂದೂ ರಕ್ಷಕನಾ?
# ಹಿಂದೂ ಧರ್ಮವೇ ತಿಳಿಯದವರು ಹಿಂದೂ ರಕ್ಷಕರಾ?

ಹಿಂದೂಗಳು ಈದಿನ ಕುಲಗಳಾಗಿ ಸೀಳಲ್ಪಟ್ಟು, ಅದರಲ್ಲಿ ಹೆಚ್ಚುಕಡಿಮೆ ಕುಲಗಳಾಗಿ ವರ್ಣಿಸಲ್ಪಟ್ಟಿದ್ದಾರೆ ಎನ್ನುವುದು ಎಲ್ಲರಿಗೂ ತಿಳಿದ ಸತ್ಯವೆ. ದೇವರು ಮನುಷ್ಯರೆಲ್ಲರನ್ನು ಸಮಾನವಾಗಿ ಹುಟ್ಟಿಸಿದರೆ ಕೆಲವರು ಮನುಷ್ಯರು ತಮ್ಮ ಸ್ವಾರ್ಥ ಬುದ್ಧಿಯಿಂದ ಹಿಂದೂ (ಇಂದೂ) ಸಮಾಜವನ್ನು ತುಂಡು ತುಂಡಾಗಿ ಕತ್ತರಿಸಿ, ಬಲಹೀನಪಡಿಸಿ ಹಿಂದೂಸಮಾಜಕ್ಕೆಲ್ಲಾ ತಾವೇ ದೊಡ್ಡವರೆಂದು, ತಾವು ಹೇಳಿದಂತೆ ಎಲ್ಲರೂ ಕೇಳಿ, ಎಲ್ಲಾ ಕಾರ್ಯಗಳು ಮಾಡಿಕೊಳ್ಳಬೇಕೆಂದು ಪ್ರಚಾರ ಮಾಡಿಕೊಂಡಿದ್ದಾರೆ. ಎಷ್ಟೋ ಕುಲಗಳಾಗಿರುವ ಹಿಂದೂ ಸಮಾಜದಲ್ಲಿ ತಮ್ಮ ಕುಲವೇ ಅಗ್ರಕುಲವೆಂದು ಹೇಳಿಕೊಳ್ಳುವುದೆ ಅಲ್ಲದೆ, ಇತರೆ ಕುಲ ದವರೆಲ್ಲರಿಗೂ ತಾವೇ ಮಾರ್ಗದರ್ಶಕರೆಂದು, ಗುರುಗಳೆಂದು ಪ್ರಕಟಿಸಿ ಕೊಂಡಿದ್ದಾರೆ. ಭವಿಷ್ಯತ್ತಿನಲ್ಲಿ ತಮಗೆ ಯಾರೂ ಅಡ್ಡಬಾರದಂತೆ, ಎಲ್ಲಾ ಕುಲಗಳನ್ನು ಅಂಟಬಾರದ ಕುಲಗಳನ್ನಾಗಿ ಮಾಡಿ, ಹಿಂದೂ ಸಮಾಜಕ್ಕೆ ತೀರದ ಅನ್ಯಾಯ ಮಾಡಿದ್ದಾರೆ. ಅಲ್ಲಿಗೆ ಸುಮ್ಮನಾಗದೆ ಇಂದಿಗೂ ಹಿಂದೂ ಸಮಾಜ ರಕ್ಷಕರಾಗಿ ಹೇಳಿಕೊಳ್ಳುತ್ತಾ, ಹಿಂದೂ ಸಮಾಜವನ್ನು ಸರ್ವನಾಶ ಮಾಡುತ್ತಾ, ಹಿಂದೂ ಸಮಾಜ ಇತರ ಮತಗಳಾಗಿ ಬದಲಾಗಿಹೋಗುವುದಕ್ಕೆ ಮೊದಲ ಕಾರಕರಾಗುತ್ತಿದ್ದಾರೆ. ಅಂತಹವರು ಹಿಂದೂ ಸಮಾಜಕ್ಕೆ ಜೀಡಿ ಹುಳಗಳಾಗಿದ್ದರೂ, ಉಳಿದ ಕುಲದವರೆಲ್ಲರೂ ಅವರ ನಿಜ ಸ್ವರೂಪವನ್ನು ತಿಳಿಯದೆ ಅವರು ಹೇಳಿದಹಾಗೆ ಕೇಳುವುದರಿಂದ, ಹಿಂದೂ ಸಮಾಜವನ್ನು ಪೂರ್ತಿಯಾಗಿ ಅಜ್ಞಾನ ದಿಶೆಗೆ, ಅಧರ್ಮ ಮಾರ್ಗದಕಡೆಗೆ ಮರಳಿಸಿ, ಪ್ರಜೆಗಳಿಗೆ ಸ್ವಲ್ಪವೂ ದೈವಜ್ಞಾನವನ್ನು ತಿಳಿಯದಹಾಗೆ ಮಾಡಿ, ತಾವು ಹೇಳುವುದೇ ದೈವಬೋಧನೆ ಎಂದು ನಂಬಿಸಿದ್ದಾರೆ.

ಅಂತಹ ಸ್ಥಿತಿಯಲ್ಲಿ ಈ ದಿನ **ತ್ರೈತ ಸಿದ್ಧಾಂತಕರ್ತರಾಗಿ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು** ಅಜ್ಞಾನದ ದಿಕ್ಕಿಗೆ ನಿಂತುಹೋಗಿರುವ ಹಿಂದೂಸಮಾಜವನ್ನು ಸರಿಯಾದ ದಾರಿಯಲ್ಲಿ ಇಡುವುದಕ್ಕೆ, ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ ಬೋಧಿಸಲ್ಪಟ್ಟಿರುವ **ಕ್ಷರ, ಅಕ್ಷರ, ಪುರುಷೋತ್ತಮ** ಎನ್ನುವ ಮೂವರು ಪುರುಷರ ವಿಷಯವನ್ನು **"ತ್ರೈತ ಸಿದ್ಧಾಂತ"** ಎಂಬ ಹೆಸರಿನಿಂದ ಪ್ರತಿಪಾದಿಸಿ ದೈವಜ್ಞಾನವನ್ನು ಎಲ್ಲರಿಗೂ ಅರ್ಥವಾಗುವಂತೆ ಗ್ರಂಥರೂಪದಲ್ಲಿ ಬರೆಯುವುದು, ಬೋಧಿಸುವುದು ನಡೆಯುತ್ತಿದೆ. ಅದರಿಂದ ಈದಿನ ಪ್ರಜೆಗಳು ಅಸಲಾದ ಜ್ಞಾನ ತಿಳಿಯುತ್ತಿದೆ ಎಂದು ಸಂತೋಷಪಡುತ್ತಿದ್ದಾರೆ. ಅಗ್ರಕುಲವಾಗಿರುವವರಲ್ಲಿ ಸಹ ಎಷ್ಟೋಜನ ತಮ್ಮ ಅಜ್ಞಾನ ಕತ್ತಲನ್ನು ಬಿಟ್ಟು, ಇಲ್ಲಿಯವರೆಗೂ ತಮಗೆ ತಿಳಿಯದ ಜ್ಞಾನ ಯೋಗೀಶ್ವರರ ಮೂಲಕ ಈಗ ತಿಳಿಯುತ್ತಿದೆಯೆಂದು ಸಂತೋಷಪಟ್ಟು ಶಿಷ್ಯರಾಗಿ ಸೇರಿಹೋಗುತ್ತಿದ್ದಾರೆ. ಆದರೆ ಅಗ್ರಕುಲದಲ್ಲಿ ಕೆಲವರು ಮಾತ್ರ ಯೋಗಿಶ್ವರರು ತಿಳಿಸುವ ಜ್ಞಾನ ವಿಷಯಗಳನ್ನು ನೋಡಿ ಈ ಜ್ಞಾನದಿಂದ ಪ್ರಜೆಗಳು ಜ್ಞಾನದಲ್ಲಿ ಚೈತನ್ಯರಾಗಿ, ಜ್ಞಾನ ತಿಳಿಯದ ತಮ್ಮನ್ನು ಗೌರವಿಸುವುದಿಲ್ಲವೆಂದು ಭಾವಿಸಿ, ಅದರಿಂದ ಸಮಾಜದ ಮೇಲೆ ತಮ್ಮ ಅಧಿಪತ್ಯ ಇಲ್ಲದಂತಾಗುತ್ತದೆಂದು ತಿಳಿದು, ಯೋಗಿಶ್ವರರು ತಿಳಿಸುತ್ತಿರುವ ತ್ರೈತ ಸಿದ್ಧಾಂತವಾಗಲಿ, ತ್ರೈತ ಸಿದ್ಧಾಂತ ಭಗವದ್ಗೀತೆಯಾಗಲಿ ಹಿಂದೂಗಳ ಜ್ಞಾನವೇ ಅಲ್ಲವೆಂದು, ಅದು ಕ್ರೈಸ್ತವ ಮತಕ್ಕೆ ಸಂಬಂಧಿಸಿರುವುದೆಂದು, ಅದನ್ನು ಯಾರೂ ಓದಬಾರದೆಂದು ಪ್ರಚಾರ ಮಾಡಲು ಪ್ರಾರಂಭಿಸಿದ್ದಾರೆ. ಅಷ್ಟೇ ಅಲ್ಲದೆ ತಾವು ಹಿಂದೂಧರ್ಮರಕ್ಷಕರೆಂದು, ಸ್ವಲ್ಪ ರಾಜಕೀಯಬಣ್ಣವನ್ನು ಬಳಿದುಕೊಂಡು, ನಮ್ಮ ಜ್ಞಾನ ಪ್ರಚಾರಕ್ಕೆ ಅಲ್ಲಲ್ಲಿ ಆತಂಕಪಡಿಸುವುದು ನಡೆಯುತ್ತಿದೆ. ತಮ್ಮ ಮಾತು ಕೇಳುವ ಇತರೆ ಕುಲದವರಿಗೂ ಸಹ ಪ್ರಬೋಧಾನಂದಯೋಗಿಶ್ವರರು ಹೇಳುವ ಜ್ಞಾನ ಹಿಂದೂ ಜ್ಞಾನ ಅಲ್ಲ, ಕ್ರೈಸ್ತವರ ಜ್ಞಾನವೆಂದು ಹಿಂದೂಗಳ ಮುಸುಗಿನಲ್ಲಿ ಕ್ರೈಸ್ತವ ಮತ ಪ್ರಚಾರ ಮಾಡುತ್ತಿದ್ದಾರೆಂದು ಹೇಳುವುದಲ್ಲದೆ, ಅಂತಹವರನ್ನು ಪ್ರೇರೇಪಿಸಿ ನಮ್ಮ ಪ್ರಚಾರಕ್ಕೆ ತಡೆಗಟ್ಟುತ್ತಿದ್ದಾರೆ.

ಯೋಗಿಶ್ವರರು ನೆಲೆಗೊಳಿಸಿದ ಹಿಂದೂ (ಇಂದೂ) ಜ್ಞಾನ ವೇದಿಕೆ ಇಂತಹ ದಬ್ಬಾಳಿಕೆಗಳನ್ನು ಸ್ವಲ್ಪಕಾಲದಿಂದ ಸಹನೆಯಿಂದ ನೋಡಲಾಗಿದೆ. ನಮ್ಮಲ್ಲಿ ಸಹನೆ ನಶಿಸಿ ನಮ್ಮನ್ನು ಅನ್ಯಮತ ಪ್ರಚಾರಕರಾಗಿ ವರ್ಣಿಸಿ ಹೇಳುವ ಅಗ್ರಕುಲದವರನ್ನು, ಅವರ ಅನುಚರರನ್ನು ನಾವು ಎದುರುತಿರುಗಿ ಪ್ರಶ್ನಿಸುವುದು ನಡೆದಿದೆ. ನಾವು ಪ್ರಶ್ನಿಸಿದ ಒಂದು ಪ್ರಶ್ನೆಗೂ ಸಹ ಅವರು ಸರಿಯಾದ ಸಮಾಧಾನ ಕೊಡಲಿಲ್ಲ. ಆ ಉತ್ತರಗಳು ಹೇಗೆ ಇವೆಯೋ ಓದುಗರಾಗಿ ನೀವು ನೋಡಿರಿ.

**ನಮ್ಮ ಪ್ರಶ್ನೆ :–** ಇಲ್ಲಿಯವರೆಗೂ ಯಾವ ಹಿಂದೂವು ಮಾಡದ ವಿಧದಲ್ಲಿ ಊರೂರು ತಿರುಗಿ, ಊರಿನಲ್ಲಿ ಮನೆಮನೆ ತಿರುಗಿ ಹಿಂದೂ ಧರ್ಮಗಳನ್ನು ಪ್ರಚಾರ ಮಾಡುತ್ತಿದ್ದೇವೆ ಅಲ್ಲವೆ! ಅಂತಹ ನಮ್ಮನ್ನು ನೀವು ಅನ್ಯಮತ ಪ್ರಚಾರಕರೆಂದು ಏಕೆ ಹೇಳುತ್ತಿದ್ದೀರಾ?

**ನಮ್ಮ ಉತ್ತರ :–** ಹಿಂದೂಮತದಲ್ಲಿ ಎಷ್ಟೋ ಜನ ಸ್ವಾಮೀಜಿಗಳು ಇದ್ದಾರೆ. ಅವರು ಯಾರೂ ಮನೆಮನೆ ತಿರುಗಿ ಪ್ರಚಾರ ಮಾಡಲಿಲ್ಲ. ಹಿಂದೂಗಳು ಹಾಗೆ ಯಾರೂ ಪ್ರಚಾರ ಮಾಡುವುದಿಲ್ಲ. ಕ್ರೈಸ್ತರಾದರೇನೆ ಬೀದಿ ಬೀದಿ, ಮನೆಮನೆ ತಿರುಗಿ ಪ್ರಚಾರ ಮಾಡುತ್ತಾರೆ. ನೀವು ಹಿಂದೂಗಳ ಮುಸುಗಿನಲ್ಲಿ ಮನೆಮನೆ ತಿರುಗಿ ಕ್ರೈಸ್ತವವನ್ನು ಪ್ರಚಾರ ಮಾಡುತ್ತಿದ್ದಾರೆ.

**ನಮ್ಮ ಪ್ರಶ್ನೆ :–** ನಾವು ಕ್ರೈಸ್ತರಾದರೆ ಭಗವದ್ಗೀತೆಯನ್ನು ಏಕೆ ಪ್ರಚಾರ ಮಾಡುತ್ತೇವೆ?

**ಅವರ ಉತ್ತರ :–** ನೀವು ಪ್ರಚಾರ ಮಾಡುವುದು ತ್ರೈತ ಸಿದ್ಧಾಂತ ಭಗವದ್ಗೀತೆ. ಅದು ಕ್ರೈಸ್ತರದ್ದು. ಬೈಬಲ್‌ಗೇ ನೀವು ಹಾಗೆ ಹೆಸರು ಇಟ್ಟಿದ್ದೀರಾ.

**ನಮ್ಮ ಪ್ರಶ್ನೆ :–** ಕ್ರೈಸ್ತರು ತಮ್ಮನ್ನು ಕ್ರೈಸ್ತರಾಗಿಯೇ ಹೇಳಿಕೊಳ್ಳುತ್ತಾರೆ. ಹಾಗೆಯೇ ಬೈಬಲನ್ನು ಬೈಬಲಾಗಿಯೇ ಹೇಳಿಕೊಳ್ಳುತ್ತಾರೆ. ಅವರ ಪ್ರಚಾರ ಕ್ರೈಸ್ತವವು,

ಬೈಬಲ್ ಆದಾಗ ಅದೇ ಹೆಸರಿನ ಮೇಲೆ ಪ್ರಚಾರ ಮಾಡುತ್ತಾರೆ ಹೊರತು ಹಿಂದೂಗಳಾಗಿ ಭಗವದ್ಗೀತೆ ಹೆಸರಿನಿಂದ ಏಕೆ ಪ್ರಚಾರ ಮಾಡುತ್ತಾರೆ? ಇಲ್ಲಿಯವರೆಗೂ ಈ ರೀತಿಯಾಗಿ ಎಲ್ಲಿಯೂ ನಡೆಯಲಿಲ್ಲ. ಯಾವ ಮತದವರು ಆ ಮತದ ಹೆಸರು ಹೇಳಿಕೊಳ್ಳುತ್ತಾರೆ ಹೊರತು ಇತರ ಮತದ ಹೆಸರು ಹೇಳುವುದಿಲ್ಲ. ಅಷ್ಟೇತಕ್ಕೆ ನೀವು ನಮ್ಮ ಭಗವದ್ಗೀತೆಯನ್ನು ತೆರೆದು ನೋಡಿದ್ದೀರಾ? ಅದರಲ್ಲಿ ಭಗವದ್ಗೀತೆ ಶ್ಲೋಕಗಳಿವೆಯಾ? ಬೈಬಲ್ ವಾಕ್ಯಗಳಿವೆಯಾ?

**ಅವರ ಉತ್ತರ :–** ತ್ರೈತ ಸಿದ್ಧಾಂತವೆಂದು ಇದೆ ಅಲ್ಲವೆ! ತ್ರೈತ ಎಂದರೆ ತ್ರಿತ್ವ ಎಂದು ತ್ರಿನಿಟಿ ಎಂದು ನಮಗೆ ಚೆನ್ನಾಗಿ ತಿಳಿದಿದೆ.

**ನಮ್ಮ ಪ್ರಶ್ನೆ :–** ಹಿಂದೂ ಧರ್ಮಗಳಲ್ಲಿ ಅದ್ವೈತ ಸಿದ್ಧಾಂತವನ್ನು ಆದಿಶಂಕರಾ ಚಾರ್ಯರು ಪ್ರತಿಪಾದಿಸಿದ್ದಾನೆ. ವಿಶಿಷ್ಟಾದ್ವೈತವನ್ನು ರಾಮಾನುಚಾರ್ಯರು ಪ್ರತಿಪಾದಿಸಿದ್ದಾನೆ, ದ್ವೈತವನ್ನು ಮಧ್ವಾಚಾರ್ಯರು ಪ್ರಕಟಿಸಿದ್ದಾನೆ. ಈಗ ಆಚಾರ್ಯ ಪ್ರಬೋಧಾನಂದ ಯೋಗಿಶ್ವರರು ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾನೆ. ಸಿದ್ಧಾಂತಕರ್ತರು, ಸಿದ್ಧಾಂತಗಳು ಬೇರೆಯಾದರೂ ಎಲ್ಲರೂ ಹಿಂದೂಗಳೆಂದು ನೀವು ಏಕೆ ಅಂದುಕೊಳ್ಳಲಿಲ್ಲ?

**ಅವರ ಉತ್ತರ :–** ನಿಮ್ಮ ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿ ಯಜ್ಞಗಳನ್ನು ಮಾಡಬಾರದೆಂದು ಬರೆದಿದ್ದೀರಾ ಅಲ್ಲವೆ! ನಿಜವಾಗಲು ಭಗವದ್ಗೀತೆಯಲ್ಲಿ ಹಾಗೆ ಇಲ್ಲ ಅಲ್ಲವೆ!

**ನಮ್ಮ ಪ್ರಶ್ನೆ :–** ನೀವು ಹಿಂದೂಗಳಲ್ಲಿ ಮುಖ್ಯರಾಗಿದ್ದು ಅಷ್ಟು ಮೂರ್ಖವಾಗಿ ಮಾತನಾಡಿದರೆ ಹೇಗೆ? ಪ್ರಪಂಚಕ್ಕೆಲ್ಲಾ ಒಂದೇ ಭಗವದ್ಗೀತೆ ಇರುತ್ತದೆ ಹೊರತು, ನಿಮ್ಮ ಭಗವದ್ಗೀತೆ, ನಮ್ಮ ಭಗವದ್ಗೀತೆ ಎಂದು ಬೇರೆ ಬೇರೆ ಇರುವುದಿಲ್ಲ. ಭಗವದ್ಗೀತೆಗೆ ವಿವರ ಒಬ್ಬೊಬ್ಬರು ಒಂದೊಂದು ವಿಧವಾಗಿ ಅವರಿಗೆ ಅರ್ಥವಾದಂತೆ ಹೇಳಿರಬಹುದು ಆದರೆ, ಎಲ್ಲರಿಗೂ ಭಗವದ್ಗೀತೆ ಮೂಲ ಗ್ರಂಥ ಒಂದೇಯೆಂದು ನೆನಪಿಟ್ಟುಕೊಳ್ಳಿ. ತ್ರೈತ ಸಿದ್ಧಾಂತ ಭಗವದ್ಗೀತೆ ಎಲ್ಲದಕ್ಕಿಂತ

ಸರಿಯಾದ ಭಾವನೆಯಿಂದ ಇದೆಯೆಂದು ಓದಿದ ಜ್ಞಾನಿಗಳೆಲ್ಲರೂ ಹೊಗಳುತ್ತಿದ್ದರೆ, ನಿಮ್ಮ ಕುಲದಲ್ಲಿ ಎಷ್ಟೋ ಜನ ಪ್ರಶಂಸಿಸುತ್ತಾ ಇದ್ದರೆ, ನಿಮಗೆ ಕೆಲವರಿಗೆ ಮಾತ್ರ ವಿರುದ್ಧವಾಗಿ ಕಾಣಿಸಿದೆಯೆಂದರೆ ಅಸೂಯೆಯಿಂದಲೇ ಎಂದು ನಮಗೆ ಅರ್ಥವಾಗುತ್ತಿದೆ. ಯಜ್ಞಗಳು ಮಾಡಬೇಡವೆಂದು ನಾವು ಎಲ್ಲಿಯೂ ಹೇಳಲಿಲ್ಲ. ಯಜ್ಞಗಳಿಂದ ಪುಣ್ಯ ಬರುತ್ತದೆ, ಸ್ವರ್ಗ ಬರುತ್ತದೆ ಎಂದು ಹೇಳಿದ್ದೇವೆ. ಯಜ್ಞಗಳಿಂದ ಮೋಕ್ಷ ಬರುವುದಿಲ್ಲ, ದೇವರು ತಿಳಿಯುವುದಿಲ್ಲವೆಂದು ಹೇಳಿದ್ದೇವೆ. ಅಷ್ಟೇಕೆ ನಾವು ಎಲ್ಲಾ ಕುಲಗಳಿಗಿಂತ ಸ್ವಚ್ಛವಾದ ಹಿಂದೂಗಳೆಂದು ನೀವು ಹೇಳಿಕೊಳ್ಳುತ್ತಿದ್ದೀರಾ ಅಲ್ಲವೆ! ಭಗವದ್ಗೀತೆ ಯಲ್ಲಿ ಹೇಳಿದ ಒಂದು ಹಿಂದೂ ಧರ್ಮವನ್ನು ಹೇಳಿರಿ.

**ಅವರ ಪ್ರಶ್ನೆ :–** ಅವೆಲ್ಲಾ ಮಾತುಗಳು ಬೇಡ... ನೀವು ಹಿಂದೂಗಳು ಅಲ್ಲ.

**ನಮ್ಮ ಪ್ರಶ್ನೆ :–** ಮೊಂಡರಂತೆ ಮಾತನಾಡಬೇಡಿ ನೀವು ಅಗ್ರಕುಲದವರೆಂದು ಇಷ್ಟಬಂದಂತೆ ಮಾತನಾಡಬೇಡಿ. ನಾವು ಹಿಂದೂಗಳು ಅಲ್ಲವೆನ್ನುವುದಕ್ಕೆ ಆಧಾರ ಏನಾದರೂ ತೋರಿಸುತ್ತೀರಾ? ನಮ್ಮ ಕಥೆ ಪಕ್ಕಕ್ಕಿಟ್ಟು ನೀವು ಸರಿಯಾದ ಹಿಂದೂಗಳೇ ಆದರೆ ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನಯೋಗವೆಂಬ ಅಧ್ಯಾಯದಲ್ಲಿ 48ನೆ ಶ್ಲೋಕದಲ್ಲಿಯೂ, 53ನೆ ಶ್ಲೋಕದಲ್ಲಿಯೂ ಭಗವಂತನು ಏನು ಹೇಳಿದ್ದಾನೋ ನೀವೇ ಹೇಳಿರಿ.

**ಅವರ ಉತ್ತರ :–** ನಾವು ಇಲ್ಲಿಯವರೆಗೂ ಭಗವದ್ಗೀತೆ ಓದಲಿಲ್ಲ. ನಿಮಗೆ ಬೇಕಾದರೆ ಸಂಪೂರ್ಣಾನಂದಸ್ವಾಮಿಯಿಂದ ಹೇಳಿಸುತ್ತೇವೆ.

**ನಮ್ಮ ಪ್ರಶ್ನೆ :–** ಕನಿಷ್ಟ ಭಗವದ್ಗೀತೆಯನ್ನು ಸಹ ಓದದ ನೀವು ಯೋಗೀಶ್ವರರಾದ ಪ್ರಬೋಧಾನಂದಸ್ವಾಮಿಯನ್ನು ದೂಷಿಸುವುದು ಒಳ್ಳೆಯದಾ? ಒಂದು ಹಿಂದೂ ಧರ್ಮವನ್ನು ಸಹ ತಿಳಿಯದ ನೀವು ಹಿಂದೂ ಧರ್ಮ ರಕ್ಷಕರೆಂದು ಹೇಳುವುದು ಒಳ್ಳೆಯದಾ? ಯೋಗೀಶ್ವರರು ಬರೆದ ಒಂದು ಗ್ರಂಥವನ್ನು ಸಹ ಓದದೆ ನಮ್ಮನ್ನು ಹೊರತುಪಡಿಸಿ ಪೂಜ್ಯರಾಗಿ, ಗುರುಗಳಾಗಿ ಯಾರೂ ಇರಬಾರದೆಂಬ

ಅಸೂಯೆಯಿಂದ ಹೀಗೆ ಮಾತನಾಡಿದರೆ ದೇವರು ಸಹಿಸಿಕೊಳ್ಳುವುದಿಲ್ಲವೆಂದು ಹೇಳುತ್ತಿದ್ದೇವೆ.

**ಅವರ ಉತ್ತರ :–** ಹಿಂದೂ ಮತದಲ್ಲಿ ಎಷ್ಟೋ ಜನ ದೇವರುಗಳಿದ್ದಾರೆ. ಶಿವನು ದೇವರೆ, ಶಿವನ ಮಗ ಗಣಪತಿ ದೇವರೇ, ರಾಮನು ದೇವರೆ, ರಾಮನ ಸೇವಕನು ಆಂಜನೇಯನು ದೇವರೆ. ಅಂತಹ ಹಿಂದೂ ಮತದಲ್ಲಿ ದೇವರು ಒಬ್ಬನೇ ಎಂದು ಹೇಳುವುದು ನಿಮ್ಮದು ತಪ್ಪು ಅಲ್ಲವೆ?

**ನಮ್ಮ ಮಾತು :–** ನಾವು ಮತವನ್ನು ಕುರಿತು ಹೇಳಲಿಲ್ಲ. ಹಿಂದೂ ಮತದಲ್ಲಿ ಎಷ್ಟೋ ಮಂದಿ ದೇವತೆಗಳಿರುವುದು ನಿಜವೆ, ಆದರೆ ಹಿಂದೂ ಜ್ಞಾನದಲ್ಲಿ, ಹಿಂದೂ ಧರ್ಮದ ಪ್ರಕಾರ ವಿಶ್ವಕ್ಕೆಲ್ಲಾ ಒಬ್ಬನೇ ದೇವರೆಂದು ಹೇಳಿದ್ದೇವೆ. ಭಗವದ್ಗೀತೆಯಲ್ಲಿ ದೇವರು ಹೇಳಿರುವುದೇ ಹೇಳಿದ್ದೇವೆ ಹೊರತು ನಾವು ದೇವತೆಗಳನ್ನು ಕುರಿತು ಇಲ್ಲವೆಂದು ಹೇಳಲಿಲ್ಲ! ದೇವತೆಗಳೆಲ್ಲರಿಗೂ ಅಧಿಪತಿ ಯಾದ ದೇವರು ಒಬ್ಬನಿದ್ದಾನೆಂದು, ಆತನೇ ದೇವದೇವನೆಂದು, ಆತನನ್ನು ಆರಾಧಿಸೆಂದು ಹೇಳಿದ್ದೇವೆ.

**ಅವರ ಉತ್ತರ :–** ನೀವು ರಾಮನ ಹೆಸರು ಹೇಳುವುದಿಲ್ಲ, ಶಿವನ ಹೆಸರು ಹೇಳುವುದಿಲ್ಲ, ವಿನಾಯಕನ ಹೆಸರು ಹೇಳುವುದಿಲ್ಲ. ಯಾರ ಹೆಸರೂ ಹೇಳದಂತೆ ದೇವರು ಎಂದು, ಸೃಷ್ಟಿಕರ್ತ ಎಂದು ಅನೇಕಬಾರಿ ಹೇಳುತ್ತಿದ್ದೀರಾ. ದೇವರು ಎಂಬ ಪದವನ್ನಾಗಲಿ, ಸೃಷ್ಟಿಕರ್ತ ಎಂಬ ಪದವನ್ನಾಗಲಿ ಕ್ರೈಸ್ತವರೆ ಬಳಸುತ್ತಾರೆ. ಹಿಂದೂಗಳು ಬಳಸುವುದಿಲ್ಲ. ಆದ್ದರಿಂದ ನಿಮ್ಮನ್ನು ಹಿಂದೂಗಳು ಅಲ್ಲ ಕ್ರೈಸ್ತವರು ಅನ್ನುತ್ತಿದ್ದೇವೆ.

**ನಮ್ಮ ಪ್ರಶ್ನೆ :–** ಕ್ರೈಸ್ತವ ಮತ ಹುಟ್ಟಿ ಎರಡು ಸಾವಿರ ವರ್ಷಗಳಾಗಿದೆ. ಸೃಷ್ಟಿಹುಟ್ಟಿ ಎಷ್ಟು ಕೋಟಿ ವರ್ಷಗಳಾಗಿದೆಯೋ ಯಾರೂ ಹೇಳಲಾರರು. ಸೃಷ್ಟ್ಯಾದಿಯಿಂದ 'ಸೃಷ್ಟಿಕರ್ತ' ಎಂಬ ಪದವನ್ನು 'ದೇವರು' ಎಂಬ ಪದವನ್ನು ಹಿಂದೂ ಸಮಾಜ ಬಳಸುತ್ತಲೇ ಇದೆ. ಮೊದಲಿನಿಂದ ಹಿಂದೂಸಮಾಜದಲ್ಲಿ

ಇರುವ ದೇವರು, ಸೃಷ್ಟಿಕರ್ತ ಎನ್ನುವ ಹೆಸರುಗಳನ್ನು ಹಿಂದೂಗಳು ಕ್ರೈಸ್ತವರಿಗೇನಾದರೂ ಲೀಜಿಗೆಕೊಟ್ಟಿದ್ದಾರಾ? ಅಥವಾ ಪೂರ್ತಿಯಾಗಿ ಅವರಿಗೇ ಮಾರಿದ್ದಾರಾ? ಎಂದು ಕೇಳುತ್ತಿದ್ದೇವೆ. ಸೃಷ್ಟಿಕರ್ತ ಎಂದಾಗಲಿ, ದೇವರು ಎಂದಾಗಲಿ ಹಿಂದೂಗಳಾ ದವರು ಅನ್ನಬಾರದೆಂದು ಎಲ್ಲಿಯಾದರೂ ಇದೆಯಾ ಎಂದು ಕೇಳುತ್ತಿದ್ದೇವೆ?

**ಅವರ ಉತ್ತರ :–** ನೀವು ಹಿಂದೂಮತವನ್ನು ಅಲ್ಲದೇ ಅನ್ಯಮತವನ್ನು ಬೋಧಿಸುತ್ತಿದ್ದಾರೆನ್ನುವುದಕ್ಕೆ, ನಿಮ್ಮನ್ನು ನೀವು ಹಿಂದೂಗಳಾಗಿ ಹೇಳಿಕೊಳ್ಳಲಿಲ್ಲ. ಹಿಂದೂಗಳಾಗಿ ಅಲ್ಲದೆ ಇಂದೂಗಳಾಗಿ ಹೇಳಿಕೊಳ್ಳುತ್ತಿದ್ದೀರ. ಅಂತಹದರಲ್ಲಿ ನೀವು ಹಿಂದೂಮತವನ್ನು ಸೀಳಿಸಿದಂತೆ ಅಲ್ಲವೆ! ಪ್ರತ್ಯೇಕಿಸಿ ಇಂದೂ ಮತ ಅನ್ನುವುದನ್ನು ಪ್ರಚಾರ ಮಾಡಿದಂತೆ ಅಲ್ಲವೆ! ನೀವು ಹಿಂದೂಗಳೇ ಆದಾಗ ನಿಮ್ಮ ಗ್ರಂಥಗಳಲ್ಲಾಗಲಿ, ನಿಮ್ಮ ಬೋಧನೆಗಳಲ್ಲಾಗಲಿ ಪ್ರತ್ಯೇಕಿಸಿ ಇಂದೂಗಳು ಎಂದು ಏಕೆ ಹೇಳುತ್ತಿದ್ದೀರ?

**ನಮ್ಮ ಮಾತು :–** ನಾವು ನೇರವಾಗಿ ಒಂದು ಪ್ರಶ್ನೆಯನ್ನು ಕೇಳುತ್ತೇವೆ ಉತ್ತರ ಹೇಳಿರಿ. ಹಿಂದೂ, ಇಂದೂ ಎಂಬ ಪದದಲ್ಲಿ ಸ್ವಲ್ಪಮಟ್ಟಿನ ಶಬ್ದ ಹೊರತುಪಡಿಸಿ ಏನು ವ್ಯತ್ಯಾಸ ಇದೆಯೋ ನೀವೆ ಹೇಳಿರಿ. ತೆಲುಗು ಭಾಷೆಯನ್ನು ಬರೆಯುವ ವರೆಲ್ಲರೂ ಹಿರಣ್ಯಕಶ್ಯಪನನ್ನು ಸಾಯಿಸಿರುವುದು ನರಶಿಂಹಸ್ವಾಮಿ ಎಂದು ಹೇಳುತ್ತಿರುತ್ತಾರೆ. ಹಾಗೆಯೇ ಬರೆಯುತ್ತಿರುತ್ತಾರೆ. ಪ್ರಸ್ತುತಕಾಲದಲ್ಲಿ ನರಶಿಂಹ ಎಂದು ಹೆಸರಿರುವವನು ಸಹ ಅವನ ಹೆಸರನ್ನು ನರಶಿಂಹ ಎಂದು ಬರೆಯುವುದು ಎಲ್ಲರಿಗೂ ತಿಳಿದಿದೆ. ಆದರೆ ಆ ಮಾತು ತಪ್ಪು ಹಾಗೆ ಬರೆಯಬಾರದು ಅದನ್ನು **ನರಸಿಂಹ** ಎಂದು ಬರೆಯಬೇಕು ಎಂದು ಹೇಳುತ್ತಿದ್ದೇವೆ. ಕಾಡಿನಲ್ಲಿ ಮೃಗರಾಜನನ್ನು **ಸಿಂಹ** ಎಂದು ಅನ್ನುತ್ತೇವೆ ಹೊರತು **ಶಿಂಹ** ಎಂದು ಅನ್ನುವುದಿಲ್ಲ ಎಂದುಸಹ ಹೇಳುತ್ತಿದ್ದೇವೆ. 'ಸಿಂಹ" ಎಂದರೆ ಅರ್ಥವಿದೆ ಆದರೆ, 'ಶಿಂಹ' ಎಂದರೆ ಅರ್ಥವಿಲ್ಲ ಎಂದು ಸಹ ಹೇಳಿದ್ದೇವೆ. ಹಾಗೆ ಇರುವುದು ಇದ್ದಂತೆ ಹೇಳಿದರೆ 'ಇಂದೂ' ಎನ್ನುವುದಕ್ಕೆ ಅರ್ಥವಿದೆ

ಆದರೆ ಹಿಂದೂ ಎನ್ನುವುದಕ್ಕೆ ಅರ್ಥವಿಲ್ಲವೆಂದು ಹೇಳಿದ್ದೇವೆ. ಸೃಷ್ಟ್ಯಾದಿಯಲ್ಲಿ ಹುಟ್ಟಿರುವುದು ಇಂದೂ ಸಮಾಜವೆಂದು, ಅದು ಮಧ್ಯದಲ್ಲಿ ಹೆಸರು ಬದಲಾಗಿ 'ದೃಷ್ಟಿ, ಜಿಷ್ಟಿ' ಆದಂತೆ ಇಂದೂ ಎಂಬ ಶಬ್ದ ಹಿಂದೂ ಎಂದು ಕರೆಯಲ್ಪಡುತ್ತಿದೆಯೆಂದು ಹೇಳಿದ್ದೇವೆ. ಇಂದೂ ಪದ ಏಕೆ ಬಳಸಬೇಕು, ಹಿಂದೂ ಪದವನ್ನು ಏಕೆ ಬಳಸಬಾರದೆಂದು ಸಹ ವಿವರವಾಗಿ ನಮ್ಮ ಗ್ರಂಥಗಳಲ್ಲಿ ಇದೆ. ಇರುವ ಸತ್ಯ ನಿಮಗೆ ತಿಳಿದರೂ, ನೀವು ನಮಗಿಂತ ದೊಡ್ಡವರು ಯಾರೂ ಇರಬಾರದೆಂಬ ಅಸೂಯೆಯಿಂದ ಮಾತನಾಡುತ್ತಿದ್ದೀರಾ.

ಅಗ್ರಕುಲದಲ್ಲಿ ಎಷ್ಟೋ ಜನ ಹಿರಿಯರು ನಮ್ಮ ಜ್ಞಾನವನ್ನು ತಿಳಿದು ಸಂತೋಷಿಸುತ್ತಿರುವಾಗ, ಕೆಲವರು ಮಾತ್ರ ಬೀದಿ ರೌಡಿಗಳಂತೆ ಹೊಡೆಯುತ್ತೇವೆ, ಕೊಲ್ಲುತ್ತೇವೆ, ಸುಡುತ್ತೇವೆ ನೀವು ಪ್ರಚಾರ ಮಾಡಬಾರದೆಂದು ಹೇಳುವುದು ಒಳ್ಳೆಯದಲ್ಲ. ನಮ್ಮ ಗ್ರಂಥಗಳನ್ನು ಯಾವುದೂ ಓದದೆ ಮಾತನಾಡುವುದು, ನಾವು ಹೇಳಿದ ಮಾತುಗಳನ್ನು ಕೇಳದಂತೆ ಇವೆಲ್ಲಾ ಡ್ರಾಮಾಗಳು, ನಾಟಕಗಳು ಅನ್ನುವುದು ಒಳ್ಳೆಯದಲ್ಲ. ನೀವು ಯಾರಾದರೂ ನಮ್ಮ ಗ್ರಂಥಗಳಲ್ಲಿ ಇತರೆ ಮತಗಳನ್ನು ಪ್ರಚಾರ ಮಾಡಿದಂತಾಗಲಿ, ಇಂತಹ ಮತದೊಳಗೆ ಸೇರಿದ್ದೇವೆಂದು ಹೇಳಿದಂತಾಗಲಿ ಇದ್ದರೆ ನಿರೂಪಣೆ ಮಾಡಿರಿ, ಹಾಗೆ ನಿರೂಪಿಸಿದವರಿಗೆ ಇಂದೂ ಜ್ಞಾನವೇದಿಕೆ ಕಡೆಯಿಂದ ಹತ್ತು ಲಕ್ಷ ರೂಪಾಯಿಗಳು ಕೊಡುತ್ತೇವೆ. ನಿರೂಪಿಸದೆ ಹೋದರೆ ನೀವು ಲಕ್ಷ ರೂಪಾಯಿಗಳು ಯಾವುದೇ ಊರಿನಲ್ಲಿನ ಕೃಷ್ಣನ ಮಂದಿರಕ್ಕೆ ಕೊಡಬೇಕು. ಈ ಷರತ್ತಿಗೆ ಯಾರಾದರೂ ಮುಂದಕ್ಕೆ ಬರುತ್ತೀರಾ? ಎಂದು ಕೇಳುತ್ತಿದ್ದೇವೆ.

ಇಂತಿ

**ಇಂದೂ ಜ್ಞಾನವೇದಿಕೆ**



# ಚರಿತ್ರೆಯಲ್ಲಿ ನಡೆದ ಅನ್ಯಾಯ ಹಿಂದೂಗಳಲ್ಲಿ ನಡೆಯುತ್ತಿರುವ ಯಥಾರ್ಥ

ನಾಲ್ಕುನೂರು ವರ್ಷಗಳ ಕೆಳಗೆ ಆಧ್ಯಾತ್ಮಿಕ ರಂಗದಲ್ಲಿ ಮೆರೆದ ವಜ್ರ **ವೇಮನಯೋಗಿ.** ಆಧ್ಯಾತ್ಮಿಕವೆಂಬ ಹಾಲನ್ನು ಕಡಿದು ದೈವಜ್ಞಾನ ಎಂಬ ಬೆಣ್ಣೆಯನ್ನು ತೆಗೆದು ಕೊಟ್ಟವನು ವೇಮನ. ವೇಮನ ತನ್ನ ಪದ್ಯಗಳಲ್ಲಿ ಹೇಳಿದ ಒಂದೊಂದು ಜ್ಞಾನವಿಷಯ ವಿವರವಾಗಿ ಬರೆದುಕೊಂಡರೆ ಒಂದೊಂದು ಗ್ರಂಥ ಆಗುತ್ತದೆ. ವೇಮನ ಸ್ವಚ್ಛವಾದ ತೆಲುಗು ಭಾಷೆಯಲ್ಲಿ ಪದ್ಯಗಳನ್ನು ಬರೆದು ಹೇಳಿದ್ದಾನೆ. ಸಂಸ್ಕೃತದ ಸುದ್ದಿಗೆ ಹೋಗಲಿಲ್ಲ. ಒಂದು ಕಡೆ ಪದ್ಯಗಳು ಬರೆದು ಕವಿಯಾಗಿ ಕಾಣಿಸಿದರೂ, ಒಂದು ಕಡೆ ಅಂತ್ಯ ತಿಳಿಯದ ಆಧ್ಯಾತ್ಮಿಕತಜ್ಞ ವೇಮನಯೋಗಿ. ಆದರೆ ಆತನು ಹುಟ್ಟಿರುವುದು ರೆಡ್ಡಿ ಕುಲದಲ್ಲಿ. ಚರಿತ್ರೆಯಲ್ಲಿ ನಮಗಿಂತ ಯಾರೂ ದೊಡ್ಡದಾಗಿ ಪ್ರಶಂಸಿಸಪಡಬಾರದೆಂದು ಗರ್ವದಲ್ಲಿರುವ ಅಗ್ರಕುಲದಲ್ಲಿನ ಕೆಲವರು ಅದೇ ಕೆಲಸವಾಗಿ ವೇಮನ ಯೋಗಿಯನ್ನು ಹುಚ್ಚನಿಗೆ ಹೋಲಿಸಿ, ಆತನು ಹೇಳಿರುವುದು ಜ್ಞಾನವೇ ಅಲ್ಲವೆಂದು ಪ್ರಜೆಗಳಲ್ಲಿ ಪ್ರಚಾರ ಮಾಡಿದ್ದಾರೆ. ಹುಚ್ಚನ ಮಾತುಗಳು ಹುಚ್ಚರೆ ಕೇಳುತ್ತಾರೆ ಎಂದು ಅವಹೇಳನವಾಗಿ ಮಾತನಾಡುವುದು ನಡೆದಿದೆ. ಅನೇಕ ಕುಲಗಳಾಗಿರುವ ಹಿಂದೂಗಳಿಗೆ ಜ್ಞಾನ ವಿಷಯದಲ್ಲಿ ಪರಿಚಯ ಇಲ್ಲದಿರುವುದರಿಂದ, ಅಗ್ರಕುಲದವರು ವೇಮನ ಹೇಳಿರುವುದು ಜ್ಞಾನವೇ ಅಲ್ಲವೆನ್ನುವುದರಿಂದ, ವೇಮನ ತನ್ನ ಜ್ಞಾನಕ್ಕೆ ತಕ್ಕಂತೆ ಪ್ರಕಾಶಿಸದೆ ಹೋಗಿದ್ದಾನೆ. ತಾವು ಅಗ್ರಕುಲದವರೆಂದು, ಉಳಿದವರೆಲ್ಲರೂ ಕಡಿಮೆ ಕುಲದವರೆಂದು ವಿಭಜಿಸಿ, ತಾವು ಹೇಳಿದಂತೆ ಕೇಳಬೇಕೆಂದು, ಹಾಗೇ ಕೇಳಿದರೇನೆ ಉಳಿದ ಕುಲದವರೆಲ್ಲರೂ ಸುಖವಾಗಿ ಬದುಕುತ್ತಾರೆಂದು, ಅಗ್ರ ಕುಲದವರು ಪ್ರಚಾರ ಮಾಡಿಕೊಂಡಿದ್ದಾರೆ. ಹಾಗೆ ತಮ್ಮನ್ನು ತಾವು ದೊಡ್ಡದಾಗಿ ಪ್ರಕಟಿಸಿಕೊಳ್ಳುವುದಲ್ಲದೆ ಹಿಂದೂಗಳ ಮನೆಯಲ್ಲಿ ನಡೆಯುವ ಪ್ರತಿ ಒಳ್ಳೆಯ ಕೆಲಸಕ್ಕು, ಕೆಟ್ಟ ಕೆಲಸಕ್ಕು, ಸಾವಿಗೂ, ಹುಟ್ಟಿಗೂ, ಮದುವೆಗೂ ಆರತಿಗೂ ಪ್ರತಿ ಕಾರ್ಯಕ್ಕೂ ತಾವು ಹೇಳಿದಂತೆ ಮಾಡಬೇಕೆಂದು, ತಾವು ನಿರ್ಣಯಿಸುವ

ಕಾಲದಲ್ಲಿಯೇ ಮಾಡಬೇಕೆಂದು, ಹಾಗೆ ಮಾಡದೆಹೋದರೆ ನಷ್ಟ, ಕಷ್ಟ ಬರುತ್ತದೆಂದು ಭಯ ಪಡಿಸುವುದರಿಂದ, ಭಯದಿಂದ ಜ್ಞಾನ ತಿಳಿಯದ ಉಳಿದ ಕುಲದವರೆಲ್ಲರೂ ಅವರು ಹೇಳಿರುವುದನ್ನು ನಂಬುವುದು ನಡೆದಿದೆ. ಈ ವಿಧವಾಗಿ ಹಿಂದೂಮತದಲ್ಲಿ ಅಗ್ರಕುಲದವರು ಭಯ ಎಂಬ ಬ್ಲಾಕ್‌ಮೆಯಿಲ್ ಮಾಡಿ, ತಗ್ಗು ಕುಲದವರೆಲ್ಲರನ್ನು ತಮ್ಮಮಾತು ಕೇಳುವಂತೆ ಮಾಡಿಕೊಂಡಿದ್ದಾರೆ. ಆ ದಿನದಿಂದ ಹಿಂದೂ ಸಮಾಜವನ್ನು ಮೋಸ ಮಾಡುತ್ತಾ ಯಾರಿಗೂ ಹಿಂದೂ ಜ್ಞಾನವನ್ನು ತಿಳಿಯದ ಹಾಗೆ ಮಾಡಿ, ತಾವು ಹಿಂದೂ ಸಮಾಜವನ್ನು ಅನೇಕ ಹೆಸರುಗಳಿಂದ ದೋಚಿಕೊಳ್ಳುತ್ತಾ ಬದುಕುವುದೇ ಅಲ್ಲದೆ, ಉಳಿದ ಕುಲಗಳಲ್ಲಿ ಯಾರು ಜ್ಞಾನಿಗಳಾಗಿ ಹುಟ್ಟಿದರೂ, ಅವರನ್ನು ಅವಹೇಳನ ಮಾಡುವುದು, ಅಜ್ಞಾನಿಯಾಗಿ ವರ್ಣಿಸುವುದು ನಡೆದಿದೆ.

ಚರಿತ್ರೆಯಲ್ಲಿ ನಾಲ್ಕುನೂರು ವರ್ಷಗಳ ಕೆಳಗೆ ಬಂದಿರುವ ವೇಮನನ್ನು ಹುಚ್ಚನಂತೆ ವರ್ಣಿಸಿ, ಶಾಸ್ತ್ರ ತಿಳಿಯದವನೆಂದು ವರ್ಣಿಸಿದ್ದಾರೆ. ನಂತರ ಇಲ್ಲಿಗೆ ಮುನ್ನೂರೈವತ್ತು ವರ್ಷಗಳ ಕೆಳಗೆ ಬಂದಿರುವ **'ಪೋತುಲೂರು ವೀರಬ್ರಹ್ಮಯ್ಯನವರು'** ದೊಡ್ಡ ಜ್ಞಾನಿಯಾಗಿ ತಯಾರಾಗಿ, ಭವಿಷ್ಯತ್ ಕಾಲದಲ್ಲಿ ನಡೆಯುವ ಸಂಘಟನೆಗಳನ್ನು ಮೊದಲೇ ತಿಳಿಸಿ ದೊಡ್ಡ ಕಾಲಜ್ಞಾನವನ್ನೆ ಬರೆದಿದ್ದಾನೆ. ಆತನು ಬರೆದ ಭವಿಷ್ಯತ್ ಕಾಲಕ್ರಮವಾಗಿ ಇಂದಿಗೂ ನಡೆಯುತ್ತಲೇ ಇದೆ. ಅಂತಹ ದೊಡ್ಡ ಜ್ಞಾನಿಯಾದ ವೀರಬ್ರಹ್ಮಯ್ಯನವರು ಅಗ್ರಕುಲದವನು ಅಲ್ಲದಿರುವುದರಿಂದ, ವಿಶ್ವಕರ್ಮ (ಆಚಾರಿ) ಕುಲದಲ್ಲಿ ಹುಟ್ಟುವುದರಿಂದ, ಅಗ್ರಕುಲದವರು ಬ್ರಹ್ಮಯ್ಯನವರು ಬದುಕಿರುವ ಕಾಲದಲ್ಲಿಯೇ, ತಮ್ಮ ಊರಿನೊಳಗೆ ಬಾರದಂತೆ, ಆತನು ಜ್ಞಾನವನ್ನು ಪ್ರಚಾರ ಮಾಡದಂತೆ ತಡೆಗಟ್ಟಿದ್ದಾರೆ. ಆ ದಿನ ಇತರರು ಜ್ಞಾನಿಗಳು ಆಗಬಾರದೆಂಬ ಅಸೂಯೆ ಎಂಬ ಗುಣದಿಂದಲೂ, ನಾವೇ ತಿಳಿದವರೆಂಬ ಗರ್ವದಿಂದಲೂ ಆ ಕೆಲಸ ಮಾಡಿದ್ದಾರೆ. ಹಿಂದೂ ಸಮಾಜದಲ್ಲಿ ಇಂತಹವರು ಇರುವುದರಿಂದ ಬೇಸರಗೊಂಡ ಹಿಂದೂಗಳು ಹಿಂದೂ ಮತವನ್ನು ಬಿಟ್ಟು ಇತರ ಮತದೊಳಗೆ

ಹೋಗುತ್ತಿದ್ದಾರೆ. ಇಂದೂಮತದಲ್ಲಿ ದೇವರಿಗೂ ಗುಡಿಗೂ ಅಂಟಬಾರದವರಾಗಿ ಇರಲಾರದವರೆಲ್ಲರೂ ಕೆಲವರು ಜ್ಞಾನಕ್ಕೋಸ್ಕರ, ಕೆಲವರು ಕುಲವಿವಕ್ಷ ಇಲ್ಲದ ಸ್ವತಂತ್ರಕ್ಕೋಸ್ಕರ ಮತಾಂತರಿಸಿದ್ದಾರೆ. ಈ ವಿಧವಾಗಿ ಹಿಂದೂಮತದಲ್ಲಿನವರು ಇತರೆ ಮತದೊಳಗೆ ಹೋಗುವುದಕ್ಕೆ ಮೊದಲ ಕಾರಕರು ಹಿಂದೂಮತದಲ್ಲಿನ ಅಗ್ರಕುಲದವರೇ ಎಂದು ಅನುಮಾನ ಇಲ್ಲದಂತೆ ಹೇಳಬಹುದು.

ತಮ್ಮಿಂದಲೇ ಹಿಂದೂಗಳು ಇತರ ಮತದೊಳಗೆ ಹೋಗುತ್ತಿದ್ದಾರೆಂದು ಅಗ್ರಕುಲದವರಿಗೆ ಸಹ ತಿಳಿದಿದೆ. ಆದರೆ ತಮ್ಮ ತಪ್ಪನ್ನು ಯಾರೂ ಗುರುತಿಸದಂತೆ ತಾವು ಹಿಂದೂಮತವನ್ನು ಉದ್ಧರಿಸುವವರಂತೆ, ಹಿಂದೂಧರ್ಮ ರಕ್ಷಕರಾಗಿ ವರ್ಣಿಸಿಕೊಂಡು ಹಿಂದೂ ಧರ್ಮ ಭಕ್ಷಕರಾಗಿ ಇಂದಿಗೂ ಸಮಾಜದಲ್ಲಿ ಮುಂದುವರೆಯುತ್ತಿದ್ದಾರೆ. ಅವರನ್ನು ಹಿಂದೂ ಧರ್ಮ ಭಕ್ಷಕರು, ಹಿಂದೂ ಧರ್ಮ ನಾಶಕರು ಎಂದು ಹೇಳುವುದಕ್ಕೆ ಅನೇಕ ಆಧಾರಗಳು ಇವೆ. ಅಂತಹುಗಳನ್ನು ಪರಿಶೀಲಿಸಿದರೆ, ಹಿಂದೂಗಳಲ್ಲಿನ ಉಳಿದ ಕುಲದವರ ಹತ್ತಿರ ಭಗವದ್ಗೀತೆಯನ್ನು ಬೋಧಿಸುವ ಕೃಷ್ಣನು ಅರ್ಜುನನು ಇರುವ ಚಿತ್ರ ಪಟ (ಫೋಟೋ) ಇದ್ದರೆ ಅದನ್ನು ಮನೆಯಲ್ಲಿ ಇಟ್ಟುಕೊಳ್ಳಬಾರದೆಂದು, ಆ ಫೋಟೋ ಮನೆಯಲ್ಲಿದ್ದರೆ ಮನೆಯಲ್ಲಿಯೂ ಸಹ ಯುದ್ಧಗಳು ಬರುತ್ತವೆಂದು, ಅನೇಕ ಕಷ್ಟಗಳು ಬಂದು ಪಾಂಡವರು ಅರಣ್ಯವಾಸ ಹೋದಂತೆ ದುಃಖ ಪಡಬೇಕಾಗಿ ಬರುತ್ತದೆಂದು ಅಗ್ರ ಕುಲದವರು ಇಂದಿಗೂ ಹೇಳುತ್ತಲೇ ಇದ್ದಾರೆ. ಅಂತಹ ಭಗವದ್ಗೀತೆ ಫೋಟೋಗಳನ್ನು ಗುಡಿಗಳಲ್ಲಿ ಇಡಬೇಕೆಂದು ಇಲ್ಲದಿದ್ದರೆ ನದಿ ಪ್ರವಾಹದಲ್ಲಿ ಬಿಸಾಡಬೇಕೆಂದು ಹೇಳುವುದು, ಮಾಡಿಸುವುದು ಸಹ ನಡೆದಿದೆ. ಅಷ್ಟೇ ಅಲ್ಲದೆ ಭಗವದ್ಗೀತೆಯನ್ನು ಮನೆಯಲ್ಲಿ ಇಟ್ಟುಕೊಳ್ಳಬಾರದೆಂದು ಭಗವದ್ಗೀತೆಯನ್ನು ಯಾರೂ ಓದಬಾರದೆಂದು, ಓದಿದರೆ ಕಷ್ಟಗಳು ಬರುತ್ತವೆಂದು, ಭಗವದ್ಗೀತೆಯನ್ನು ಯಾರ ಮನೆಯಲ್ಲಿಯೂ ಇಲ್ಲದಹಾಗೆ ಮಾಡುತ್ತಿದ್ದಾರೆ. ಭಗವದ್ಗೀತೆ ಅರ್ಜುನನಿಗೆ ಯುದ್ಧರಂಗದಲ್ಲಿ ಯುದ್ಧ ಮಾಡುವುದಕ್ಕೆ ಹೇಳಿರುವುದು, ಆದ್ದರಿಂದ ಓದಬಾರದು, ಓದಿದರೆ ಓದಿದವರು ಸಹ ಅನೇಕ

ತಗಾದೆಗಳಲ್ಲಿಯೂ, ಕೋರ್ಟು ವ್ಯವಹಾರಗಳಲ್ಲಿಯೂ ಸಿಲುಕಿಕೊಳ್ಳಬೇಕಾಗಿ ಬರುತ್ತದೆಂದು ಹೇಳುವುದು ನಡೆಯುತ್ತಿದೆ. ಇನ್ನೂ ಹಿಂದುಗಳಿಗೆ ವೇದಗಳು ಮುಖ್ಯವಾದವೆಂದು, ಅವುಗಳನ್ನು ಎಲ್ಲಾ ಕುಲದವರು ಓದಬಾರದೆಂದು, ವೇದಗಳನ್ನು ತಾವೇ ಓದಬೇಕೆಂದು ಹೇಳುವುದು ಸಹ ನಡೆಯುತ್ತಿದೆ. ಈ ವಿಧವಾಗಿ ಭಗವದ್ಗೀತೆಗೆ ವಿರುದ್ಧವಾಗಿ ಮಾತನಾಡುವವರು. ಹಿಂದೂ ಸಮಾಜಕ್ಕೆ ಜೀಡಿಹುಳಗಳಲ್ಲದೆ ಏನಾಗುತ್ತಾರೊ ನೀವೇ ಆಲೋಚಿಸಿರಿ.

ಇದೆಲ್ಲವೂ ಗತಕಾಲದಲ್ಲಿ ನಡೆದ ವಿಷಯಗಳು, ಅವು ಸಾಲದೆ ಪ್ರಸ್ತುತ ಕಾಲದಲ್ಲಿ ಇವರ ಸಹಿಸಲಾರದತನ, ನಾವೇ ದೊಡ್ಡವರು ಎಂಬ ಗರ್ವ ಹೇಗಿದೆಯೋ ನೋಡಿರಿ. ವೇಮನಯೋಗಿಯನ್ನು, ಪೋತುಲೂರಿ ವೀರಬ್ರಹ್ಮಯ್ಯ ರವರನ್ನು ಅಗ್ರ ಕುಲದವರು ಎಷ್ಟು ಅವಹೇಳನೆ ಮಾಡಿದರೂ, ವೇಮನ ಯೋಗಿಯನ್ನು ರೆಡ್ಡಿ ಕುಲಸ್ಥರು ವೇಮಾ ರೆಡ್ಡಿಗಳಂತೆ ಕುದುರೆಗಳನ್ನೇರಿ ಪ್ರಚಾರ ಮಾಡುವುದರಿಂದ, ವೀರಬ್ರಹ್ಮಯ್ಯರವರನ್ನು ವಿಶ್ವಕರ್ಮ (ಆಚಾರಿ) ಕುಲದವರು ಕಾಲಜ್ಞಾನವನ್ನು ಪ್ರಚಾರ ಮಾಡುವುದರಿಂದ, ವೇಮನ ಸಂಘಗಳು, ವಿಶ್ವಕರ್ಮ ಸಂಘಗಳು ತಯಾರಾಗಿ ವೇಮನನನ್ನು, ಬ್ರಹ್ಮಯ್ಯನವರನ್ನು ಪ್ರಚಾರ ಮಾಡುವು ದರಿಂದ, ಸ್ವಲ್ಪ ಜನ ಪ್ರಜೆಗಳಿಗೆ ವೇಮನಯೋಗಿ ಪದ್ಯಗಳು, ವೀರಬ್ರಹ್ಮಯ್ಯನವರ ಕಾಲಜ್ಞಾನ ಸ್ವಲ್ಪಮಟ್ಟಿಗೆ ತಿಳಿಯುತ್ತದೆ. ವೇಮನಯೋಗಿ ಆ ಕಾಲದಲ್ಲಿಯೇ ತನ್ನ ಪದ್ಯಗಳಲ್ಲಿ, ಅಗ್ರಕುಲದವರು ಮಾಡುವ ತಪ್ಪುಗಳನ್ನು ಬಯಲಿಗಿಟ್ಟಿದ್ದಾನೆ. ವೀರಬ್ರಹ್ಮಯ್ಯನವರ ಚರಿತ್ರೆಯಲ್ಲಿ ಸಹ ಬ್ರಹ್ಮಯ್ಯನವರಿಗೆ ಅಗ್ರಕುಲದವರು ಮಾಡಿದ ಆತಂಕಗಳನ್ನು ಬರೆಯುವುದು ನಡೆದಿದೆ.

ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ **"ಪ್ರಬೊಧಾಶ್ರಮ ಉನ್ನತ ವಾದ ಜ್ಞಾನ ಇರುವುದು"** ಎಂದು ಮೂನ್ನೂರೈವತ್ತು ವರ್ಷಗಳಲ್ಲಿಯೇ ಬರೆದಿಟ್ಟಿದ್ದಾನೆ. ಕಾಲಜ್ಞಾನದಲ್ಲಿ 'ಪ್ರಬೋಧಾಶ್ರಮ' ಒಂದರ ಹೆಸರಿರುವುದು ಇತ್ತೀಚೆಗೆ ಐದು ವರ್ಷಗಳ ಕೆಳಗೆ ನಮಗೆ ತಿಳಿದಿದೆ. ನಂತರ ಬ್ರಹ್ಮಯ್ಯನವರು ಬರೆದ ಕಾಲಜ್ಞಾನದಲ್ಲಿ ಪ್ರಬೋಧಾಶ್ರಮಕ್ಕೆ, ಪ್ರಬೋಧಾನಂದ ಯೋಗಿಶ್ವರರಿಗೆ

ಸಂಬಂಧಿಸಿದ ಬಹಳ ವಿಷಯಗಳು ಬರೆದಂತೆ ತಿಳಿದಿದೆ. ಎಷ್ಟೋ ದೊಡ್ಡ ಜ್ಞಾನಿ, ಕಾಲಜ್ಞಾನಿಯಾದ ಪೋತುಲೂರಿ ವೀರಬ್ರಹ್ಮಯ್ಯನವರು ಪ್ರಬೋಧಾಶ್ರಮಾಧಿಪತಿಯಾದ ಪ್ರಬೋಧಾನಂದಯೋಗಿಶ್ವರರನ್ನು ದೊಡ್ಡದಾಗಿ ಹೇಳುತ್ತಾ **"ಪ್ರಬೋಧಾಶ್ರಮದವರು ಶಯನಾಧಿಪತಿ ಗುಣಗಳು ಹೊಂದಿದ್ದಾರೆ. ಶಯನಾಧಿಪತಿಯೇ ಆನಂದಗುರುವು. ಆನಂದ ಗುರುವೇ ನನಗೂ ಗುರು, ನಿಮಗೂ ಗುರು"** ಎಂದು ಬರೆಯಲಾಗಿದೆ. ಪ್ರಬೋಧಾನಂದಯೋಗಿಶ್ವರರ ಜ್ಞಾನವೇನೊ ಎಷ್ಟು ಶಕ್ತಿವಂತವಾದುದೋ ಜ್ಞಾನ ಜಿಜ್ಞಾಸಿಗಳಿಗೂ ಸಹ ತಿಳಿಯುತ್ತಿದೆ. ಎಷ್ಟೋ ಮಂದಿ ಜ್ಞಾನಿಗಳಾದವರು ಯೋಗಿಶ್ವರರು ಹೇಳುತ್ತಿರುವ ಜ್ಞಾನ ಎಷ್ಟೋ ದೊಡ್ಡದೆಂದು ಪ್ರಶಂಸಿಸುತ್ತಿದ್ದಾರೆ. ಬ್ರಹ್ಮಯ್ಯನವರೇ ಸ್ವತಃ ತನ್ನ ಗುರುವಾಗಿ ಹೇಳಿಕೊಂಡ ವ್ಯಕ್ತಿ ಎಂತಹವನಾಗಿರುತ್ತಾನೋ ನಾವು ಸಹ ಆಲೋಚಿಸಬೇಕಾಗಿರುತ್ತದೆ. ಆದರೂ ಪ್ರಬೋಧಾನಂದಯೋಗೀಶ್ವರರು ಒಂದು ದೈವಜ್ಞಾನದಲ್ಲಿ ಹೊರತು ಉಳಿದೆಲ್ಲವುಗಳಲ್ಲಿ ಸಾಧಾರಣ ವ್ಯಕ್ತಿಯಾಗಿಯೇ ಕಾಣಿಸುತ್ತಾನೆ. ಎದುರುಗಡೆ ನೋಡಿದರೆ ಈತನಿಗೆ ಜ್ಞಾನ ತಿಳಿದಿದೆಯಾ! ಎನ್ನುವಂತೆ ಕಾಣಿಸಿದರೂ, ಹೌದು ಆತನು ಯಾರಿಗೂ ತಿಳಿಯದ ದೊಡ್ಡವನೆನ್ನುವಂತೆ ಆತನು ಬರೆದ ಗ್ರಂಥಗಳೇ ದೊಡ್ಡ ಶಕ್ತಿಗಳಾಗಿ ನಿರೂಪಿಸಿಕೊಂಡಿವೆ. ಒಂದು ಗ್ರಂಥದ ಹತ್ತಿರಕ್ಕೆ ಬರುತ್ತಲೆ ಕೆಲವರಲ್ಲಿ ಬದಲಾವಣೆ ಕಾಣಿಸುವುದು, ಕೆಲವರು ಗ್ರಂಥವನ್ನು ಓದಿದ ತಕ್ಷಣ ಅಲ್ಲಿಯವರೆಗೂ ಗುಣವಾಗದ ರೋಗಗಳು ಸಹ ಹೋಗುವುದು ನಡೆಯುತ್ತಿದೆ.

ಮೇಲ್ನೋಟಕ್ಕೆ ಕಾಣಿಸದ ಶಕ್ತಿ ಯೋಗೀಶ್ವರರಲ್ಲಿ ನಿಕ್ಷಿಪ್ತವಾಗಿರುವುದು ಹೊರಗೆ ಕಾಣಿಸದೆ ಹೋದರೂ ಆತನ ಹತ್ತಿರಕ್ಕೆ ಹೋದವರಿಗೆ ದೇಹದಲ್ಲಿ ಗುಣವಾಗದ, ಔಷಧಿಗಳಿಲ್ಲದ ಎಯಿಡ್ಸ್, ಕ್ಯಾನ್ಸರ್, ಡೆಂಗೀ ಜ್ವರಗಳು ಸಹಿತವು ಶಾಂತಿಸಿ ಹೋಗುವುದು ನಡೆಯುತ್ತಿರುವುದರಿಂದ ಯೋಗಿಶ್ವರರು ಎಂತಹವರೊ ಯಾರಿಗಾದರೂ ಸುಲಭವಾಗಿ ಅರ್ಥವಾಗುತ್ತದೆ.

ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ **"ಆನಂದ ಯೋಗಿಯನ್ನು ದೂಷಿಸಿದವರು ಬಹಳ ತೊಂದರೆಗಳ ಪಾಲಾಗುತ್ತಾರೆಂದು"** ಬರೆಯುವುದು ನಡೆದಿದೆ. ಹಾಗೆಯೆ ಆತನನ್ನಾಗಲಿ, ಆತನ ಗ್ರಂಥಗಳನ್ನಾಗಲಿ ದೂಷಿಸಿದವರು ಇಲ್ಲಿಯವರೆಗು ಯಾರೂ ಸುರಕ್ಷಿತವಾಗಿ ಇಲ್ಲ. ತಿಳಿಯದ ರೋಗಗಳಿಂದ, ಅರ್ಥವಾಗದ ಬಾಧೆಗಳಿಂದ ಕೆಲವರಿರುವಾಗ, ಕೆಲವರು ಚಿತ್ರಹಿಂಸೆಗಳ ಪಾಲಾಗಿ ಮರಣಿಸುವುದು ನಡೆದಿದೆ. ಹಾಗೆ ಏಕೆ ನಡೆಯುತ್ತಿದೆಯೊ ತಿಳಿಯದವರು, ಪಾಪವನ್ನು ಮೂಟೆಕಟ್ಟಿಕೊಳ್ಳುವುದಕ್ಕೆ ಯೋಗೀಶ್ವರರ ಜ್ಞಾನಕ್ಕೆ ಅಲ್ಲಲ್ಲಿ ಆತಂಕಗಳನ್ನು ಉಂಟುಮಾಡುತ್ತಿದ್ದಾರೆ. ಹಿಂದೂಮತದಲ್ಲಿ ಆದಿಶಂಕರಾ ಚಾರ್ಯರು ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾನೆ. ನಂತರ ಸ್ವಲ್ಪಕಾಲಕ್ಕೆ ವಿಶಿಷ್ಟಾದ್ವೈತ ಸಿದ್ಧಾಂತವನ್ನು ರಾಮಾನುಜಾಚಾರ್ಯರು ಪ್ರತಿಪಾದಿಸಿದ್ದಾನೆ. ಮತ್ತೆ ಸ್ವಲ್ಪ ಕಾಲಕ್ಕೆ ದ್ವೈತ ಸಿದ್ಧಾಂತವನ್ನು ಮಧ್ವಾಚಾರ್ಯರು ಪ್ರಕಟಿಸಿದ್ದಾನೆ. ಇವರು ಮೂವರು ಅಗ್ರಕುಲದವರು ಆಗಿರುವುದು ವಿಶೇಷ. ಕಳೆದ ಮೂವತ್ತಾರು ವರ್ಷಗಳಿಂದ **ತ್ರೈತ ಸಿದ್ಧಾಂತವನ್ನು ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು ಪ್ರಕಟಿಸಿ, ಆ ಸಿದ್ಧಾಂತವನ್ನೇ ಪ್ರಚಾರ ಮಾಡುತ್ತಾ ತ್ರೈತ ಸಿದ್ಧಾಂತದ ಪ್ರಕಾರ ಭಗವದ್ಗೀತೆಯನ್ನು ವಿವರಿಸಿ ಬರೆಯುವುದು ನಡೆದಿದೆ**. ಹಿಂದೂಮತದಲ್ಲಿನ ಸಿದ್ಧಾಂತಗಳ ವಿವರ ತಿಳಿಯದ ಪ್ರಜೆಗಳಿಗೆ, ಅಗ್ರಕುಲದವರು ತ್ರೈತ ಎಂದರೆ ಕ್ರೈಸ್ತರಿಗೆ ಸಂಬಂಧಿಸಿರುವುದೆಂದು, ತ್ರೈತ ಸಿದ್ಧಾಂತ ಭಗವದ್ಗೀತೆಯೆಂದು ಮೇಲ್ನೋಟಕ್ಕೆ ಹೇಳುತ್ತಾ ಒಳೊಳಗೆ ಕ್ರೈಸ್ತ ಮತವನ್ನು ಬೋಧಿಸುತ್ತಿದ್ದಾರೆಂದು" ಯೋಗೀಶ್ವರರಿಗೆ, ಯೋಗೀಶ್ವರರ ಜ್ಞಾನಕ್ಕೆ ವಿರುದ್ಧವಾಗಿ ಹೇಳುವುದು ನಡೆದಿದೆ. ಹಿಂದೂತ್ವವನ್ನು ಒಂದು ಕಡೆ ಸರ್ವನಾಶ ಮಾಡುತ್ತಿರುವ ಅಗ್ರಕುಲದವರು ಹಿಂದೂಮತವನ್ನು ಕಾಪಾಡುವವರಂತೆ ನಟಿಸುತ್ತಾ ಯೋಗೀಶ್ವರರ ಜ್ಞಾನಕ್ಕೆ ಕೆಲವು ಕಡೆ ಆತಂಕವನ್ನುಂಟುಮಾಡುವುದು ನಡೆದಿದೆ. ಮೂರುಕಡೆ ಅನ್ಯಮತಪ್ರಚಾರವೆಂದು ಭಗವದ್ಗೀತೆಯನ್ನು ಪ್ರಚಾರ ಮಾಡುವ ಯೋಗೀಶ್ವರರ ಶಿಷ್ಯರ ಮೇಲೆ ಕೇಸುಗಳು ಇಡುವುದು ಸಹ ನಡೆದಿದೆ. ಕೆಲವು ಕಡೆ ಪ್ರತ್ಯಕ್ಷ ದಾಳಿಗಳು ಮಾಡುವುದು ನಡೆದಿದೆ. ಆದರೂ ಪ್ರಬೋಧಾನಂದ ಶಿಷ್ಯರು

ಎಲ್ಲದಕ್ಕೂ ತಾಳ್ಮೆ ಸಹನೆ ವಹಿಸಿ, ಜ್ಞಾನಪ್ರಚಾರ ಮಾಡುತ್ತಿದ್ದಾರೆ. ಈ ಮಧ್ಯಕಾಲದಲ್ಲಿ ನಲ್ಗೊಂಡ ಜಿಲ್ಲೆ ಭುವನಗಿರಿಯಲ್ಲಿ ದೇವೇಂದ್ರ ಎನ್ನುವ ನಮ್ಮ ಸಂಘ ಸದಸ್ಯನ ಮೇಲೆ ಅನ್ಯಮತ ಪ್ರಚಾರ ಮಾಡುತ್ತಿದ್ದಾನೆಂದು ಆರೋಪಿಸಿ ಕೇಸು ಇಡುವುದು ನಡೆದಿದೆ. ಅಷ್ಟೇ ಅಲ್ಲದೆ ನಮ್ಮ ಪ್ರಚಾರ ವಾಹನ ಭುವನಗಿರಿಗೆ ಹೋದಾಗ ನಮ್ಮ ಊರಿನಲ್ಲಿ ಪ್ರಚಾರ ಮಾಡಬೇಡವೆಂದು ತಡೆಗಟ್ಟಿ ಹಿಂದಕ್ಕೆ ಕಳಿಸುವುದು ನಡೆದಿದೆ. ಕರೀಂನಗರದಲ್ಲಿ ಗೋಡೆಮೇಲೆ "ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಓದಿರಿ" ಎಂದು ಬರೆದರೆ, ಅಗ್ರಕುಲದವರು ಬಂದು ಇದು ಕ್ರೈಸ್ತವ ಮತಪ್ರಚಾರ ಅದನ್ನು ಅಳಿಸಿಹಾಕಿರೆಂದು ಹೇಳುವುದು ನಡೆದಿದೆ. ಎರಡು ದಿನಗಳ ಕೆಳಗೆ ಆರ್ಲಗಡ್ಡೆ ಎಂಬ ಊರಲ್ಲಿ ಪ್ರಚಾರ ವಾಹನ ಇರುವಾಗ ಅಲ್ಲಿಗೆ ಒಬ್ಬ ಅಗ್ರಕುಲಸ್ಥನು ಬಂದು ಇದು ಕ್ರೈಸ್ತವ ಪ್ರಚಾರ, ಈ ಪ್ರಚಾರವನ್ನು ನಿಲ್ಲಿಸಿಹಾಕಿರೆಂದು ಘರ್ಷಣೆಗೆ ಬಂದಾಗ, ಆ ಸಮಯಕ್ಕೆ ನಮ್ಮ ಗ್ರಂಥಗಳನ್ನು ಓದಿದವರು ಅಲ್ಲಿರುವುದರಿಂದ ಅವರೇ ಅಗ್ರಕುಲದವರಿಗೆ ಬುದ್ಧಿಹೇಳಿ ಕಳಿಸುವುದು ನಡೆದಿದೆ. ಅಲ್ಲಿರುವ ಪ್ರಜೆಗಳು ಹೇಳಿರುವ ಮಾತುಗಳು "ಇದು ಎಷ್ಟೋ ಶ್ರೇಷ್ಟವಾದ ಜ್ಞಾನ ಇಷ್ಟು ಕಾಲಕ್ಕೆ ಶ್ರೇಷ್ಟವಾದ ಜ್ಞಾನ ದೊರೆತಿದೆಯೆಂದು ನಾವು ಸಂತೋಷಪಡುತ್ತಿದ್ದರೆ, ಸಮಾಜವನ್ನು ಸರ್ವನಾಶ ಮಾಡಿದ ನೀವು ಇದನ್ನು ಜ್ಞಾನ ಅಲ್ಲವೆನ್ನುತ್ತೀರಾ? ಹೀಗೆ ಮಾತನಾಡಿದರೆ ಊರಿನಲ್ಲಿ ಇಲ್ಲದಹಾಗೆ ನಿಮ್ಮನ್ನು ನಾವೇ ಕಳಿಸುತ್ತೇವೆ" ಎಂದು ಅನ್ನುವುದು ನಡೆದಿದೆ. ಈ ವಿಧವಾಗಿ ಪ್ರಜೆಗಳೆ ತಿರುಗಿಬಿದ್ದು ಬುದ್ಧಿಹೇಳುವ ಸಮಯ ಎಲ್ಲಾಕಡೆ ಬರುತ್ತದೆ.

ಗೌತಮಬುದ್ಧನು ಜ್ಞಾನ ಹೇಳಿದರೆ ಆತನು ಅಗ್ರಕುಲದವನು ಅಲ್ಲವೆಂದು, ಆತನದ್ದು ಬೇರೆ ಮತವೆಂದು ಪ್ರಚಾರ ಮಾಡಿದ್ದಾರೆ. ಆ ದಿನ ಗೌತಮನು ಹಿಂದೂವೆ ಅಲ್ಲವೆ! ತಮ್ಮ ಅಧಿಪತ್ಯಕ್ಕೋಸ್ಕರ ಹಿಂದೂಮತದಿಂದ ಬುದ್ಧನನ್ನು ಬೇರೆಮಾಡಿ ಆತನದ್ದು ಬೌದ್ಧಮತವೆಂದು ಹೇಳಿ ಹಿಂದೂಮತದಿಂದ ಹೊರಹಾಕಿದ್ದಾರೆ. ಈ ದಿನ ಬೌದ್ಧಮತ ವಿದೇಶಗಳಲ್ಲಿ ವ್ಯಾಪಿಸಿದ್ದರೂ ಸ್ವದೇಶದಲ್ಲಿ ಇಲ್ಲದ ಹಾಗೆ ಮಾಡಿರುವುದು ಅಗ್ರಕುಲದವರು ಅಲ್ಲವೆ! ಈ ದಿನ ಬುದ್ಧನು

ನಮ್ಮವನೆ ಬೌದ್ಧವು ಹಿಂದೂಮತವೇ ಎಂದು ಹೇಳಿಕೊಳ್ಳಲಾರದ ಪರಿಸ್ಥಿತಿ ನಮಗೆ ಏರ್ಪಟ್ಟಿದೆ. ಹಾಗೆಯೆ ಪ್ರಬೋಧಾನಂದ ಯೋಗೀಶ್ವರರು ಹೇಳುವ ತ್ರೈತ ಸಿದ್ಧಾಂತವನ್ನು ಹಿಂದೂ ಮತದಲ್ಲಿನ ಭಾಗ ಅಲ್ಲವೆನ್ನುವುದು, ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಭಗವದ್ಗೀತೆಯೇ ಅಲ್ಲವೆನ್ನುವುದು ಒಂದುಕಡೆ ಪ್ರಜೆಗಳು ಗಮನಿಸುತ್ತಿದ್ದಾರೆ. ಪ್ರಬೋಧಾನಂದ ಯೋಗೀಶ್ವರರು ಕಳೆದ 40 ವರ್ಷಗಳಿಂದ ಬೋಧಿಸುತ್ತಿರುವ ಬೋಧನೆ ಹಿಂದೂತ್ವದಲ್ಲಿಯೇ ಎಷ್ಟೋ ದೊಡ್ಡದೆಂದು ಎಲ್ಲಾ ಮತದವರು ಒಪ್ಪಿಕೊಳ್ಳುತ್ತಿರುವಾಗ, ಕಡಿಮೆಕುಲದವರೆಂದು ಅಗ್ರಕುಲದಿಂದ ಅನ್ನಲ್ಪಟ್ಟವರೆಲ್ಲರೂ ಹಿಂದೂ (ಇಂದೂ) ಜ್ಞಾನವನ್ನು ತಿಳಿದು ಕೊಂಡು ಚೈತನ್ಯವಂತರಾಗಿ ಅಗ್ರಕುಲದವರಿಗೆ ತಿರುಗಿಬಿದ್ದು ಜ್ಞಾನ ಹೇಳುವ ಸ್ಥಿತಿಗೆ ಬೆಳೆದಿದ್ದಾರೆ. ಕಡಿಮೆ ಕುಲದವರಮೇಲೆ ಆಧಾರಪಟ್ಟು ಬದುಕುತ್ತಿರುವ ಅಗ್ರಕುಲದವರನ್ನು ಕಡಿಮೆ ಕುಲದವರೆಲ್ಲರೂ ಒಂದು ಬಾರಿ ಹೊರಹಾಕಿದರೆ, ನಿಮ್ಮೊಂದಿಗೆ ನಮಗೆ ಸಂಬಂಧ ಬೇಡ ಎಂದರೆ ಏನಾಗುತ್ತದೋ ಹೇಳಬೇಕಾದ ಅವಶ್ಯಕತೆ ಇಲ್ಲ. ಅಂತಹ ಸ್ಥಿತಿ ಬಾರದಂತಿರುವುದಕ್ಕೆ ನಮ್ಮ ಜ್ಞಾನಕ್ಕೆ ಅಡ್ಡಬರಬೇಡವೆಂದು ಅಗ್ರಕುಲದವರಿಗೆ ಪದೇಪದೇ ಹೇಳುತ್ತಿದ್ದೇವೆ.

ಇಂತಿ

**ಪ್ರಬೋಧ ಸೇವಾಸಮಿತಿ**



# ಪ್ರಾಥಮಿಕ ಜ್ಞಾನ

## ಯೋಗೀಶ್ವರರವರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ಪ್ರಕಟನೆಗಳು


















































































